ಸಮಾಜೋನ್ನತೀ ಪುಷ್ಪಮಾಲಾ ಧಾರವಾಡ ೩ನೇ ಪುಷ್ಪ

# ರೈತರ ಭಾಗ್ಯೋದಯ

## ಚಿಕ್ಕ ನಾಟಕ



ರೈತರ ಜೀವಜ್ಯೋತಿಗಳಾದ

**ಸರದಾರ ವಲ್ಲಭಭಾಯಿಯವರು**

ಲೇಖಕ:—ಭಾಲಚಂದ್ರ ವೆಂಕಟೇಶ ಘಾಣೇಕರ ಮಿಶ್ರೀಕೋಟಿ

(೫೦೦೦ ಪ್ರತಿಗಳು)

ಧಾರವಾಡ ೧೯೩೧

ಬೆಲೆ ೨ ಆಣೆ



# ಹುರುಕು

ಯಾತರಿಂದ ಗುಣವಾಗುವದು?

ಸುಪ್ರಸಿದ್ಧ "ಪಶುಸಂಜೀವಿನೀ" ಶೋಧಕರಾದ

**ಡಾಕ್ಟರ ಎಸ್. ಆರ್. ಕಿತ್ತೂರ**

ಇವರ

**ಜಗಪ್ರಸಿದ್ಧ "ಶಾಂತವೀರ" ಹುರುಕಿನ ಔಷಧದಿಂದ.**

ಹೀಗೇನು? ಹಾಗಾದರೆ ಕೂಡಲೆ ಪತ್ರ ಬರೆಯಿರಿ.

ಬೆಲೆ—ಚೀಟು ೧ಕ್ಕೆ ೨ ಆಣೆ ಡಝನಕ್ಕೆ ೧—೪—೦ ಟ. ಖರ್ಚು ಬೇರೆ

**ನಮ್ಮಲ್ಲಿ ದೊರೆಯುವ ಇತರ ಔಷಧಗಳು**

| | ರೂ. ಅ. | | ರೂ. ಅ. |
|---|---|---|---|
| ಹೇಸು-ಶೀರುನಾಶಕ ಚೀಟು ೧೦೦ಕ್ಕೆ | ೨—೦ | ಆರೋಗ್ಯಬಿಂದು ಬಾಟ್ಲಿ ೧ಕ್ಕೆ | ೦—೮ |
| ಕಣ್ಣುಬೇನೆಯ ಔಷದ ,, | ೧—೨ | ಶಾಂತವೀರ ಕ್ಯಾಲರ ಚೀಟು ೧ಕ್ಕೆ | ೦—೨ |
| ಪಿತ್ತಶಾಂತಿಯ ಚೀಟು ,, | ೪—೮ | ಹಲ್ಲುಶೂಲೆಯ ಔಷದ ಬಾಟ್ಲಿ ೧ಕ್ಕೆ | ೦—೮ |
| ನೀಲೀ ಕಪ್ಪುಮಶಿ ,, | ೦—೧೨ | ಗಜಕರ್ಣ ಮಲಮು ಡಬ್ಬಿ ೧ಕ್ಕೆ | ೦—೪ |
| ಪಶುಸಂಜೀವಿನೀ ಡಬ್ಬಿ ೧ಕ್ಕೆ | ೧—೦ | ಬಾಣಂತೀಗುಳಿಗೆ ಡಬ್ಬಿ ೧ಕ್ಕೆ | ೬—೦ |

ಸೂಚನೆ:—ಔಷಧ ಬೇಡುವವರು ಅರ್ಧ ಹಣವನ್ನು ಮುಂಗಡವಾಗಿ ಕಳುಹಿಸಬೇಕು. ೧ ರೂ. ಗಿಂತ ಕಡಿಮೆ ವ್ಹಿ. ಪಿ. ಬೇಡಬಾರದು.

ವಿಳಾಸ:—

**ಡಾಕ್ಟರ ಶಾಂತವೀರ ರಾಚಿದೇವ ಕಿತ್ತೂರ**

'ಪಶುಸಂಜೀವಿನೀ' ಶೋಧಕ. ಮಾರ್ಕೆಟ ಧಾರವಾಡ.

---

ಈ ಪುಸ್ತಕವನ್ನು ಶ್ರೀ. ಕೃಷ್ಣ ಹರಿ ಕುಲಕರ್ಣಿ ಇವರು ಧಾರವಾಡದ
ತಮ್ಮ ಕರ್ನಾವೀರ ಮುದ್ರಣಾಲಯದಲ್ಲಿ ಮುದ್ರಿಸಿದರು ಮತ್ತು
ಶ್ರೀ. ಬಾಲಚಂದ್ರ ವೆಂಕಟೇಶ ಘಾಣೇಕರ ಇವರು
ಸಮಾಜೋನ್ನತಿ ಪುಷ್ಪಮಾಲಾ ಆಫೀಸ ಧಾರವಾಡ ಇಲ್ಲಿ ಪ್ರಸಿದ್ಧಿಸಿದರು.



# ಮುಡಿಪು



ಕನ್ನಡ ಕಡುಗಲಿಗಳಾದ

**ಡಾ. ಹರ್ಡೀಕರ·ನಾರಾಯಣರಾಯರ**

ಚರಣಕಮಲಗಳಿಗೆ

ಮುಡಿಪು

ಭಾಲಚಂದ್ರ

# ಮುನ್ನುಡಿ

ರೈತರೇ ರಾಷ್ಟ್ರ, ರಾಷ್ಟ್ರವೇ ರೈತರು ಎಂಬ ಮಾತನ್ನು ಎಷ್ಟು ಪರಿಯಿಂದ ಹೇಳಿದರೂ ಸಾಲದು. ಅಂಥ ರೈತರು ಈಗ ನಮ್ಮ ಹಿಂದುಸ್ಥಾನದಲ್ಲಿ ಬಹಳ ಕಂಗಾಲ ಸ್ಥಿತಿಯಲ್ಲಿರುವರು. ಅವರ ಮೇಲೆ ಪ್ರತಿಯೊಬ್ಬರೂ ದಾಳೀ ಇಡುವರು. ಹಗಲಿರುಳು ಭೂಮಿಯಲ್ಲಿ ಬಂಗಾರ ಬೆಳೆಯುವನರು ಅವರು. ಆದರೆ ಅವರೇ ಅನ್ನಾನ್ನಗತಿಕ ಸ್ಥಿತಿಯಲ್ಲಿರುವರು. ಸಾವುಕಾರರೂ ಅವರನ್ನೇ ಸುಲಿಯುವರು. ವತನದಾರರೂ ಅವರ ಮೇಲೆಯೇ ತಮ್ಮ ಚೈನಿ ಚಲ್ಲಾಟಗಳನ್ನು ನಡೆಸುವರು. ಸರಕಾರದವರಂತೂ ತೆರಿಗೆಯ ತುಂಬಡಿಯನ್ನು ಹಚ್ಚೀ ಕುಳಿತಿರುವರು. ಈ ಸ್ಥಿತಿಯಲ್ಲಿ ರೈತರಲ್ಲಿ ಧೈರ್ಯ, ಸಂಘಟನೆ ಇವು ಉಂಟಾಗುವಂಥ ಸುಲಭ ವಾಙ್ಮಯದ ಅವಶ್ಯಕತೆ ಇರುವದು. ಆ ಕಾರ್ಯವನ್ನು ಈ ಚಿಕ್ಕ ಪುಸ್ತಕವು ಮಾಡುವದು. ರೈತರ ಸ್ಥಿತಿ ಅಧಿಕಾರಿಗಳ ದರ್ಪ, ಸಂಘಟನೆಯ ಸಾಮರ್ಥ್ಯ ಇವುಗಳನ್ನು ಈ ಕಥೆಯು ಚನ್ನಾಗಿ ಚಿತ್ರಿಸುತ್ತಿದೆ.

ಲೇಖಕನು ಇನ್ನೂ ಚಿಕ್ಕವನು. ಎಳೇ ಬಾಲಕನೇ ಅನ್ನಬಹುದು. ಅವನು ಈ ಪುಸ್ತಕವನ್ನು ಬರೆದಿರುವನು. ಅವನು ಸ್ವತಃ ಕರನಿರಾಕರಣೆಯ ಚಳವಳಿಯ ಕಾಲಕ್ಕೆ ಅಂಕೋಲಾ ತಾಲೂಕಿನಲ್ಲಿ ದುಡಿದವನಿರುವನು. ಪ್ರತ್ಯಕ್ಷ ನೋಡಿ ಬರೆದವನು, ಕಂಡು ಕಾಣಿಸಿದವನು. ಈ ನಾಟಕವು ಕಾಲ್ಪನಿಕವಿದ್ದರೂ ಇದರಲ್ಲಿ ಲೇಖಿಸಿದ ಚಿತ್ರವು ಸತ್ಯವೆಂದೇ ಹೇಳಬಹುದು. ಕಲ್ಪನೆಯ ಹೊದಿಕೆಯಲ್ಲಿ ಹುದುಗಿದ ಆ ಸತ್ಯದ ಮೂಲಕವೇ ಈ ಕಥೆಗೆ ಅಷ್ಟೊಂದು ಮಹತ್ವವು.

ಶಾಲೆಯ ಮಕ್ಕಳು ಇದನ್ನು ಮಾಡಿ ತೋರಿಸುವಂತೆಯೂ ಇದೆ. ವಿಶೇಷವಾಗಿ ಹಳ್ಳಿಗಳಲ್ಲಿ ಆಡಿದರೆ ಇದರ ಪರಿಣಾಮವು ಹೆಚ್ಚು ಆಗುವದು. ಉತರೋತ್ತರ ಇಂಥ ವಾಙ್ಮಯದ ವೃದ್ಧಿಯಾಗಿ ರೈತರಲ್ಲಿ ಜಾಗೃತಿಯಾಗಲೆಂದೂ ಮಿಕ್ಕವಲ್ಲಿ ಅವರ ಬಗ್ಗೆ ಸಹಾನುಭೂತಿಯುಂಟಾಗಲೆಂದೂ ನಾನು ಬಯಸುವೆನು.

ರಂಗನಾಥ ರಾಮಚಂದ್ರ
ದಿವಾಕರ.

## ಒಂದು ಮಾತು

ಓದುಗ ಮಹಾಶಯರೇ, ಕನ್ನಡಿಗರಾದ ತಮ್ಮೆಲ್ಲರ ನೆರವಿನಿಂದಲೇ ನಮ್ಮ “ಸಮಾಜೊನ್ನತೀ ಪುಷ್ಪಮಾಲೆ” ಯ ಈ ೩ ನೇ ಪುಷ್ಪವು ಅರಳಿತು. ಇದೇ ರೀತಿಯಿಂದ ನಮಗೆ ಪ್ರೋತ್ಸಾಹನೆಯನ್ನೀಯುತ್ತ ಬಂದರೆ ಅನೇಕ ಪುಷ್ಪಗಳು ಪ್ರಫುಲ್ಲಿತವಾಗಬಹುದು. ನಮ್ಮ ಮಾಲೆಗೆ ಅನೇಕ ದೊಡ್ಡ ದೊಡ್ಡ ಲೇಖಕರು ಸಹ ಲೇಖ, ಕತೆ ಮೊದಲಾದವುಗಳಿಂದ ಸಹಾಯ ಮಾಡುತ್ತೇವೆಂದು ವಚನವನಿತ್ತಿದ್ದಾರೆ. ಹಣದ ಕೊರತೆಯೊಂದಿದೆ. ಉದಾರ ಹಸ್ತದಿಂದ ಎಲ್ಲರೂ ತಮ್ಮ ಕೈಲಾದಷ್ಟು ಸಹಾಯವನ್ನು ಮಾಲೆಗೆ ಮಾಡಬೇಕೆಂದು ಬೇಡಿಕೊಳ್ಳುತ್ತೇವೆ ಸಹಾಯ ಮಾಡಿದವರು ಪಾವತೀ ಪಡೆಯಬೇಕು.

ನನ್ನ ಈ ಚಿಕ್ಕ ನಾಟಕಕ್ಕೆ ಮುನ್ನುಡಿ ಬರೆದ ಕೊಟ್ಟಂಥ ದೇ। ಭ। ಶ್ರೀ. ದಿವಾಕರ ರಂಗರಾಯರನ್ನು ಎಂದೆಂದಿಗೂ ಮರೆಯಲಾರೆನು. ಅದೇಮೇರೆಗೆ ಇವನ್ನು ತಿದ್ದುಪಡಿಸುವದರಲ್ಲಿ ಸಹಾಯ ಮಾಡಿದ ಶ್ರೀ. ಮೇವುಂಡಿ ಮಲ್ಹಾರಿಯವರ ಉಪಕಾರವನ್ನೂ ಮರೆಯಲಾರೆನು.

ಭಾಲಚಂದ್ರ

### ನಮ್ಮ ಮಾಲೆಯ ಏಜಂಟರೂ ಪುಸ್ತಕ ಸಿಗುವ ಸ್ಥಳಗಳೂ

ಧಾರವಾಡ

೧ ಜಿ. ವ್ಹಿ. ನವರತ್ನ ಮಾರ್ಕೆಟ್ ರೋಡ
೨ ಕರ್ನಾಟಕ ಬುಕ್ಕ ಡಿಪೋ
೩ ಕರ್ನಾಟಕ ಸಾಹಿತ್ಯ ಮಂದಿರ
೪ ಸಾತೇ ಬುಕ್ ಡಿಪೋ
೫ ಶಂಕರ ಕರ್ನಾಟಕ ಪುಸ್ತಕ ಭಾಂಡಾರ
೬ ಶ್ರೀಕೃಷ್ಣ ಪುಸ್ತಕಾಲಯ
೭ ಶಿವ ನವೀರ ಪುಸ್ತಕಾಲಯ

ಬೈಲಹೊಂಗಲ ಭೀಮಾಜಿ ದತ್ತಾತ್ರೇಯ ಹದ್ದಾರ, ಪುಸ್ತಕ ವ್ಯಾಪಾರಿ ಹಾಗೂ ನ್ಯೂಜ ಪೇಪರಏಜಂಟ.

ಕುಮಟಾ:- ರಾಮನಾಥ ಶಾನುಭಾಗ.

ಗದಗ:- ಆರ್. ಕೆ. ಅಸುಂಡಿ.

ಶಿರ್ಶಿ: ಬಸಪ್ಪ. ರಾಮಣ್ಣ ಆಲೂರ

ಹುಬ್ಬಳ್ಳಿ:- ತರುಣ ಕರ್ನಾಟಕ ಕಾರ್ಯಾಲಯದಲ್ಲಿಯೂ ಹಾಗೂ ಚೆನ್ನಪ್ಪ ಮೆಣಬದ, ಮಹಲಿಂಗಪ್ಪ ಮೊದಲಾದ ಏಜಂಟರ ಕಡೆಗೂ ದೊರೆಯುತ್ತವೆ.

## ರಾಜಹಂಸ

(೧೮ ವರುಷಗಳಿಂದ ಒಂದೇ ಸವನೆ ಕನ್ನಡನಾಡಿನ ಸೇವೆಮಾಡುತ್ತಿರುವ ವೃತ್ತಪತ್ರ!)

ಕರ್ನಾಟಕದಲ್ಲಿ ಶ್ರೇಷ್ಟವಾದ ದಿನಪತ್ರಿಕೆಯು ಇದೊಂದೇ. ರಾಜಕೀಯ, ಸಾಮಾಜಿಕ, ಶೈಕ್ಷಣಿಕ, ಔದ್ಯೋಗಿಕ ಮೊದಲಾದ ವಿಷಯಗಳ ಮೇಲೆ ಸುಪ್ರಸಿದ್ಧ ಲೇಖಕರಿಂದ ನಿರ್ಭಿಡೆಯಿಂದ ಬರೆಯಲ್ಪಡುವ ಉತ್ತಮವಾದ ಲೇಖಗಳು ದಿನಾಲು ಬರುವವು. ತಾರಿನಿಂದ ತಾಜಾಸುದ್ದಿಗಳನ್ನು ದೊರಕಿಸುವದರಲ್ಲಿ ಕನ್ನಡ ಪತ್ರಗಳಲ್ಲಿ ಇದೇ ಶ್ರೇಷ್ಠವಾದದ್ದು. ಇದರ ಪ್ರಚಾರವು ಅಖಿಲ ಕರ್ನಾಟಕದಲ್ಲಿಯೂ ಬಹಳೇ ಇದ್ದುದರಿಂದ ಜಾಹೀರಾತುದಾರರಿಗೆ ಸುವರ್ಣಸಂಧಿ! ಅಲಭ್ಯಲಾಭ! ಅಂಚೆ ವೆ. ಸೇರಿ ನಿತ್ಯಪತ್ರ ವಾರ್ಷಿಕ ವರ್ಗಣಿ ೧೨ ರೂ. ವಾರ ಪತ್ರ ೩ ರೂ. ಕೂಡಲೇ ಬರೆಯಿರಿ!

ಮೆನೆಜರ 'ರಾಜಹಂಸ' ಧಾರವಾಡ

---

## ತರುಣ ಕರ್ನಾಟಕ

ಉಜ್ವಲವಾದ ರಾಷ್ಟ್ರೀಯ ದಿನಪತ್ರಿಕೆ

ಸಂಪಾದಕರುಃ— ಎಲ್. ಎಸ್. ಪಾಟೀಲ ಹುಬ್ಬಳ್ಳಿ.

ಇದರಲ್ಲಿ ರಾಜಕೀಯ, ಸಾಮಾಜಿಕ ಹಾಗು ನೈತಿಕ ಲೇಖಗಳು ದಿನಾಲು ಪ್ರಕಟವಾಗುತ್ತವೆ. ಸ್ಪೇಶಲ್ ತಾರಿನ ಸುದ್ದಿಗಳು ಇದರಲ್ಲಿ ಇರುವದರಿಂದ ದೇಶೀ ವಿದೇಶಿಯ ಸುದ್ದಿಗಳು ಕರ್ನಾಟಕದಲ್ಲಿಯ ಯಾವ ಪತ್ರಿಕೆಗಳಿಗಿಂತಲೂ ಮೊದಲು ಇದರಲ್ಲಿ ದೊರೆಯುವವು. ಕರ್ನಾಟಕದಲ್ಲಿ ಇಷ್ಟು ದೊಡ್ಡ ಪತ್ರಿಕೆಯು ಬೇರೊಂದಿಲ್ಲ. ಇದರಲ್ಲಿಯೇ ಜಾಹೀರಾತುಕೊಡಿರಿ. ದಿನಪತ್ರಿಕೆ ತಿಂಗಳಿಗೆ ೧ ರೂಪಾಯಿ ವಾರಪತ್ರಿಕೆ ವರ್ಷಕ್ಕೆ ೩। ರೂ.

ಮೆನೆಜರ 'ತರುಣ ಕರ್ನಾಟಕ' ಹುಬ್ಬಳ್ಳಿ

---

## ಕರ್ಮವೀರ

ಸಂಪಾದಕರುಃ— ರಂಗನಾಥ ರಾಮಚಂದ್ರ ದಿವಾಕರ.

ಕರ್ನಾಟಕದ ಪ್ರಮುಖ ರಾಷ್ಟ್ರಿಯ ವಾರಪತ್ರಿಕೆಯಿದು. ಕರ್ನಾಟಕವು ಸರ್ವಾಂಗ ಸುಂದರವಾಗಲಿಕ್ಕೂ ಭಾರತವು ಸಂಪೂರ್ಣ ಸ್ವತಂತ್ರವಾಗಲಿಕ್ಕೂ ಬೇಕಾಗುವ ಎಲ್ಲ ಲೇಖಗಳೂ ಸುದ್ದಿಗಳೂ ಪ್ರತಿಸಲವೂ ಪ್ರಕಟವಾಗುವವು. ವಾ. ಚಂದಾ ಅಂಚೆ. ವೆಚ್ಚ ಸೇರಿ ೩ ರೂ. ೧೨ ಆಣೆ ಮಾತ್ರ

ಮೆನೆಜರ 'ಕರ್ಮವೀರ' ಧಾರವಾಡ

# ರೈತರ ಭಾಗ್ಯೋದಯು

## ಚಿಕ್ಕ ನಾಟಕ

### ೧ ನೇ ಪ್ರವೇಶ

ಸ್ಥಳಃ— (ರೈತನ ಹರಕು ಮುರಕು ಮನೆ. ಒಳಗೆ ಅವನ ಹೆಂಡತಿ ಚಿನ್ನವ್ವ ಮಣ್ಣಿನೊಳಗೆ ಕೂಡಿದಂಥ ಕಾಳನ್ನು ಕೇರುತ್ತಲಿದ್ದಾಳೆ. ಅವರ ಮಗ ಯಲ್ಲಪ್ಪನು ತನ್ನಷ್ಟಕ್ಕೆ ತಾನೇ ಗುಂಡಿನಾಟವಾಡುತ್ತ ಕುಳಿತಿದ್ದಾನೆ. ಚಿನ್ನವ್ವ ಕಾಳು ಕೇರಿ ಬೇಸತ್ತಿರುವಳು. ಕೈಯ್ಯೊಳಗಿನ ಮರವನ್ನು ಕೆಳಗಿಟ್ಟು ಹಣೆಗೆ ಕೈ ಹಚ್ಚಿಕೊಂಡು ರೋದಿಸುತ್ತ)

ಚಿನ್ನವ್ವ:— (ಸ್ವಗತ) ಶಿವ ಶಿವಾ! ಎಂತಾ ವ್ಯಾಳ್ಯೇವು ಬಂತ್ಪಾ ನಮ್ಗ? ಮುಂಜಾಲೀ ಸೊಟ್ಟು ಚೆಂಜ್ಮಟಾ ನಾನೂ ನನ್ನ ಹಿರ್ಯಾ ದುಡದ ದುಡಿತೇವಿ. ಎಲ್ಲಾ ರೊಕ್ಕಾನೂ ಸಾಲಗಾರ ಪಾಲ್ಗೇ ಆಗಿ ಹೊಕ್ಕೈತಿ. ಕಾಗೀ ಗುಬ್ಬೀ ಹಾಂಗ ದಾರ್‍ಯಾಗ ಬಿದ್ದದವೂ, ಕಣದಾಗ ಬಿದ್ದದ್ದೂ ಮಣ್ಣಾಳಾರಿಸಿಕೊಂಡು ಬಾಳೇವು ಮಾಡ್ಬೇಕಾಗ್ಯೈತಿ. ಯಪ್ಪಾ! ಮಾದೇವ್ರೇ! ಕಣ್ತೆರೀ ಬಾರ್ದೇ? ಏಟು ಆರ್ಸಿದ್ರೂ ಈ ದಿನಾಆಣಕೀ ಮಗನ್ಗಂಜೀ ಪೂರ್ತೇನೂ ಕಾಳ್ಬರಬಾರ್ದೇ? ಹಯ್ಯೋ ಶಿವನೆ....ಹಯ್ಯೋ ಶಿವನೆ....

(ಯಲ್ಲನ ಗುಂಡಿನಾಟವು ನಡೆದೇ ಇದೆ.)

ಯಲ್ಲಃ— (ಸ್ವಗತ) ಒಂದೋ, ಯಾಡ್ಡೋ, ನೂರೊ, ಹತ್ತೋ. ಕೇ.... ಹೋ....

(ಆಟವಾಡವಾಡುತ್ತ ಅವನಿಗೆ ಪುಸ್ತಕದ ನೆನಪು ಬರುತ್ತದೆ. ತಾಯಿಯ ಹತ್ತರ ಬಂದು)

ಯಲ್ಲ:— ಎಬೇ ಯವ್ವಾ! ಪುಸ್ತಕಾ ಕೊಡ್ಸೆಬೇ! ಪುಸ್ತಕಾ ತರ್ದಿದ್ದರ ಹೊಡೀತೇವಿ ಅಂದಾರು ಮಾಸ್ತರಿವತ್ತ.

ಚಿನ್ನವ್ವ:—ನಾಳಿ ಕೊಡ್ಸೋಣಂತ ಮಗನ.

ಯಲ್ಲ:— ದಿನಾ ನಾಳಿ ನಾಳಿ ಅಂತ ಹೇಳ್ತಿದಿ ಹೋಗ್ಬೇ! ಇವತ್ತ ಕೊಡಸ್ಬೇಕು. ಕೊಡಸ್ದಿದ್ರ ನಾ ಸಾಲ್ಗೇ ಹೋಗೋದಿಲ್ಲ.

ಚಿನ್ನವ್ವ:—(ಸ್ವಗತ) ದ್ಯಾವ್ರೇ ಹುಡುಗನ್ನಾತೂ ಖರೇವೈತಿ. ದಿನಾ ಹಿಂಗೇ ಹೇಳಾಕ್ಹತ್ತೇನಿ. ಏನ್ಮಾಡ್ಲಿ? ನಾಳೆರ ಎಲ್ಲಿಂದ ಕೊಡ್ಸೆತೇನಿ? (ಸ್ವಲ್ಪ ತಡೆದು) ಈ ಇಂಗ್ರೇಜೀ ಸರಕಾರ್ದವರ ನಮ್ಮಂತಾ ಬಡವರ ಮಕ್ಕಳ್ಗೆ ಪುಗಸೆಟ್ಲೆ ವಿದ್ದೇವು ಕಲಸೋದೂ, ಪಾಟೀಪುಸ್ತಕ ಕೊಡ್ಸೋದೂ ಕೇಳೀಬ್ಯಾಡ್ರಿ. ಜಿಗಳಿ ಹೀರಿದಾಂಗ ನಮ್ಮ ರೊಕ್ಕಾ ಹಿರ್‍ಯೋದೊಂದೇ ಗೊತ್ತೈತಿ ಪುಣಿವಂತರ್ಗೆ. ಎಲ್ಲಾ ಕರೇವು. ಆದರ ಮಗ್ಗ ಏನ್ಹೇಳ್ಲಿ? ಬ್ಯಾಡೇಬ್ಯಾಡ! ವಿದ್ಯೇವೇ ಬ್ಯಾಡ! ದನಾಕಾಯಾಕ್ಹಚ್ಚಿಬಿಡ್ತೇನಿ ಹುಡಗ್ಗ-

(ಅವಳ ಗಂಡ ಫಕ್ಕೀರನು ಪ್ರವೇಶಿಸುವನು. ಕೈಯಲ್ಲಿ ಒಂದು ಕುಂಬಳಕಾಯಿ ಹಿಡಿದಿದ್ದಾನೆ. ಊಟಕ್ಕೆ ಕುಂಬಳಕಾಯಿಯಾದರೂ ದೊರೆಯಿತಲ್ಲ? ಎಂದು ಅವನಿಗೆ ಆನಂದವಾಗಿದೆ.)

ಫಕ್ಕಿರ:—ಚಿನ್ನೀ! ಚಿನ್ನಿ! ಇದನ್ನೀಟುಗಡಾನ ಕುಚ್ಚು. ಹಸುವಾಗೆಯ್ತಿ. [ಅವಳ ಹತ್ತಿರ ಬರುವನು] ಅಳಾಕೇನಾತ? ಏಳು ಹುಚ್ಚಿ ಹಂಗ ಮಾಡ್ಬ್ಯಾಡ.

ಚಿನ್ನವ್ವ:-ಯಲ್ಲ್ಯಾ ಪುಸ್ತಕ್ಕೇಕಂತ್ಕಾಡಾಕಹತ್ಯಾನ. ಏನ್ಮಾಡ್ಲಿ? ಏನ್ಹೇಳ್ಲಿ?

ಫಕ್ಕೀರ: [ಸ್ವಾಗತ] ನಾನಾದರೂ ಏನ್ಹೇಳ್ಲಿ? ಇದ್ದ ಸಾಲಾ ತೀರ್‍ಸೋದ ಸಾಕಾಗಿ ಹೋಗ್ಯೈತಿ. ವಿಸಾ ಕುಡ್ದೇನಂದ್ರ ಒಂದು ಪೈ ಇಲ್ಲ ಹಂತ್ಯಾಕ. ಶಿರಿಮಂತ ಮಂದಿಗೆ

ಬೇಡಿದ್ರ ದಾದ ಹತ್ತಿಕೊಡೋದಿಲ್ಲ. ಹೊತ್ತೊತ್ತಿ ವ್ಯಾಳ್ಯೇ ವೂ ಬಂದಾಗ ಬಿಟ್ಟೀ ಮಾಡಿಸ್ಗೊಂತಾನ; ಭಿಡೇಕ ಬಿತ್ತಾ ಮಾಳ್ಗಿ ಹಸಾ ಮಾಡಿಸ್ಗೊಂತಾನ; ಮಕ್ಕ ಮದ್ವೀ ಗಿದ್ವೀ ಆದರಂತೂ ಪುಗಸಟ್ಟೆ ಕೆಣಬೀಳ ದುಡಿಸ್ಗೊತಾನ. ಇವತ್ತ ಕೂಳಿಲ್ದ ಸಾಯಾಕ ಹತ್ತೇವ್ರಿ ಅಂತ ಜಾಗೀರದಾರ್ಗ ಹೇಳಿ ಕೊಂಡ್ರ ಒಂದ್ಕುಂಬಳಕಾಯಿ ಕೊಟ್ಟಾನ ಮಾರಾಯಾ. ಈಟರ ಕೊಟ್ಟಾ ಆ ಮಾತು ಬ್ಯಾರೆ. ರೀತಿ ರಿವಾಜರೆಗೊತ್ತಿ ರಬೇಕೋ ಇಲ್ರಿ ಅವಗ? ತಾನೂ ಬರೇ ಕುಂಬಳಕಾಯಿ ತಿಂತಾನೇನು ಮನ್ಯಾಗ? ಯಾಕ್ಕತಿನ್ನಾಕ ಹೋದಾನ್ರೀ? ಗೋದೀ ರೊಟ್ಟೀ ತಿನ್ನೋ ಅಲ್ಲೆ ಜ್ವಾಳದ ರೊಟ್ಟೀ ತಿನ್ನಾ ಕೊಲ್ಲ!

[ಓಲೇಕಾರನು ಪ್ರವೇಶಿಸುವನು]

ಓಲೇಕಾರಃ—ಫಕ್ಕೀರಪ್ಪ! ಫಕ್ಕೀರಪ್ಪ! ಓ ಫಕ್ಕೀರಪ್ಪ! ಗೌಡರು ಬಾ ಅಂದಾರು. ಗಡಾನ ಬಾ. [ಹೇಳಿ ಹೋಗುವನು]

ಫಕ್ಕೀರಃ— ಚೆನ್ನೀ! ಈಗ್ಹೋಗಿ ಬರ್ತೇನಿ. ಆಲ್ಲೀ ಮಟ ಕಾಯ್ಕು ಚ್ಚಿಡು. ಆ.

ಚೆನ್ನವ್ವಃ—ಗೌಡ್ರ್ಯಾಕ ಕರಸ್ಯಾರು ? ಹಿಂದ್ಮುಂದೇನರ ಐತೇನು ?

ಫಕ್ಕೀರಃ— ಹಿಂದ್ಮುಂದೇನಿರೋದು ? ಹೊಲದ ಹಪ್ತೇದ ಸಂಬಂದಿ ಏನರ ಇದ್ದೀತು ? ಈ ವರ್ಷ ಕೊಡಾಕಾಗೋದಿಲ್ಲ ಅಂತ ಎಲ್ಲಾರೂ ಕೂಡಿಕೊಂಡ್ಯಾಕ್ಯಸ ಅರ್ಜೀ ಬರ್ಕೊಂಡಿದ್ದಿಲ್ಲ!? ಉತ್ರ ಗಿತ್ರನರ ಬಂದೈತೇನೋ ? ಅದಿರ್ಲಿ. ಕುಚ್ಚಾಟ ಕ್ತಡಾ ಮಾಡಬ್ಯಾಡಾ. [ಹೋಗುವನು.]

ಚೆನ್ನವ್ವಃ—[ಸ್ವಗತ] ಈಗ ಕೊಡಾಕ್ಕೇಕಂತ ಉತ್ರ ಬಂದ್ರೇನ್ಮಾಡ ಬೇಕು ? ಮತ್ತ ಸಾಲದ್ಹೊರ್ತು ಗತಿಯಿಲ್ಲ. ಸಾಲಾ ಆದ್ರೂ ಯಾರ ಕೊಡತಾರು ? ನನ್ನ ಬಿರ್ಯಾ ಅಣಕೀ ಹ್ವಾದ ಜಾತ್ರಿಕ್ತಾಳ್ಳಿಂದೀ ಒತ್ತಿ ಇಟ್ಟ. ಮನ್ನೆ ಮನ್ನೆ ಮೂಗತೀ ಒತ್ತೀ ಇಟ್ಟ. ಬಂಗಾರ ಬಳೀ ಅಂತೂ

ಮುಂಚೇ ಮಾರ್ಬಿಟ್ಟಾನು. ಅಂದ ಮ್ಯಾಗ ಸಾಲಾ ಯಾರ್ಕೊಡ್ತಾರು ? ಏನರ ಆಗಲಿ ಶಿವಾ ಗತಿ ಅದಾನು.

[ಸ್ವಸ್ಥ ಕೂಡ್ರುವಳು.]

ಯಲ್ಲ:— ಯವ್ವಾ! ಹಸುವಾಗ್ಯೆತಿ ಗಂಜೀ ನೀಡ್ಬೇ.

ಚಿನ್ನವ್ವ:— ಒಂದ್ಕೊತಪಾನ ನೀರ್ತಂದು ಮಾಡಿ ಹಾಕ್ತೇನಿ ಮಗನ. [ನೀರಿನ ಕೊಡ ತೆಗೆದುಕೊಂಡು] [ತನ್ನಲ್ಲಿ ತಾನೇ]ಹೊಟ್ಟ್ಯಾಗಿಂದು ಶನೀ ಆಗ್ಯೆತೆಲ್ಲ. ಎಲ್ಲಾರ್ಗ್ಯೂ

[ತೆರೆ ಬೀಳುವದು]

## ೨ನೇ ಪ್ರವೇಶ

[ಗೌಡರ ಮನೆಗೆ ಹೋಗುವ ದಾರಿ. ಒಂದು ಕಡೆಯಿಂದ ಓಲೇಕಾರನೂ ಮತ್ತೊಂದು ಕಡೆಯಿಂದ ಸಿಪಾಯಿಯೂ ಪ್ರವೇಶಿಸುವರು.]

ಸಿಪಾಯಿ:— ಯಾಕಲೇ ಪೀರ್ಯಾ ? ಎಲ್ಲಿ ಹೋಗಿದ್ದೆಲಾ ಮಗನ ? ಅವಸರ ಬಾಳೇನು ?

ಓಲೇಕಾರ:— ಇಲ್ಲೆಪ್ಪಾ. ಮ್ಯಾಗಿನ ಮನಿ ಫಕ್ಕೀರನ್ನ ಕರ್ಯಾಕ್ಹೇಳಿದ್ರು ಗೌಡ್ರು.

ಸಿಪಾಯಿ:— ನಿಂದ ಸಜ್ಜಣ್ಣಾ ಮಗನ. ಅವನ್ನ ಕರ್ಯಾಕ್ಹೋದೆ ಇವನ್ನ ಕರ್ಯಾಕ್ಹೋದೆ ಅನ್ನೋದು. ಎಲ್ಲಾರ್ನೂ ಉಬ್ಸಿ ಉಬ್ಸಿ ಛಾ ಕುಡ್ಯೋದು. ಛಾ ಕುಡದು ಬಂದ್ಯೋ ಇಲ್ಲೋ ಈಗ?

ಓಲೇಕಾರ:— ಎಲ್ರೀ, ಹುಚ್ಚಿಡದ್ಯೆತಿ ನಿಮ್ಗ. ರೈತರ ಕೈಯಾಗ ದುಡ್ಡಿಲ್ಲಾ ಯಾರ್ಕೊಡತಾರೀಗ ? ನಿಮ್ಮದ ಪಾಡು ಬಿಡ್ರಿ. ಆ ಮೋಟಾರದವನ್ಗೆ ಬೆದರಿಸ್ದೆ ಈ ಚಕಡೀಯವಗ ಬೆದರಿಸ್ದೆ ಆ ಟಾಂಗಾದವ್ಗ ಹೆದರಿಸ್ದೇ ಜನಕೊಂತ ಹತ್ ಹುತ್ ಮಾಡಿ ಬೇಕಾದಷ್ಟು ಛಾ ಕುಡೀತೀರಿ. ಬೇಕಾದಷ್ಟು ದುಡ್ಡುಚ್ಚತೀರಿ.

ಪಾಯಿ:—ಇಬ್ಬರ್ದೂ ಪಾಡ ಅನಬಾರದ? ನೀ ಏನು ಕಡಿಮೀ ಯದ ಆದೀ? ಮನ್ನೆ ರಾಮರಾಯ್ರ ಮನೀಗೆ ಜಪ್ತೀ ಗ್ಯೋದಾಗ ಯಿಗತಿಯಿಂದ ಬೆಳ್ಳೀ ಸರಪಣೀ ಕಡೇ ಹೊತ್ಕೊಂಡು ಬರಲಿಲ್ಲ? (ಅತ್ತಕಡೆಗೆ ನೊಡುವನು) ಆಗಾ! ಫಕ್ಕೀರನೂ ಇತ್ತ ಕಡೇನ ಬಂದ. ಒಂದೀಟು ಮೋಜು ಮಾಡೋಣೇನು?

(ಫಕ್ಕೀರನು ದೀನ ಮುದ್ರೆಯಿಂದ ಪ್ರವೇಶಿಸುವನು)

ಫಕ್ಕೀರ:— ಸಲಾಮ್ರಿ ದ್ಯಾವ್ರು.

ಪಾಯಿ:— ಸಲಾಂ ಗಿಲಾಂ ಇರ್ಲಿ. ಫಕ್ಕೀರಾ ಛಾ ಕೊಡ್ತೊದಿಲ್ಲೇನು

ಫಕ್ಕೀರ:—ಯಪ್ಪಾ! ಎಲ್ಲೀ ಛಾ ಮಹಾರಾಯಾ? ಕುಡ್ಯಾಕ ಗಂಜಿಲ್ಲದ ಸಾಯೋ ಹೊತ್ನ್ಯಾಗ ಛಾ ಬೇಡ್ತೀರಲ್ರಿ? ನಮ್ಮ ರೈತರ್ಗೆ ಎಂತಾ ಕಾಲ ಬಂತ್ರೀ ದ್ಯಾವ್ರು? (ಅಳಹತ್ತಿದ)

ಪಾಯಿ:—ಏಲೇ ಫಕ್ಯಾ! ಹಗಣಾ ಮಾಡಬ್ಯಾಡ. ಅತ್ತರ ಕೇಳತಿ ರತಾರೇನು ಮಗನ? ಕಳ್ಳರು ನೋಡಲಾ ನೀವು. ರೊಕ್ಕಿ ಲ್ಲಂತ ಸುಳ್ಳೀ ಹೇಳ್ತೀರಿ.

ಫಕ್ಕೀರ:— ನಾವು ಹಿಂಗ ಸುಳ್ಳೀಳಿ ಮೋಸಾ ಮಾಡೋವರಲ್ಲೆಪ್ಪಾ! ನಮ್ಮ ಹಂತೀಕ ಇಂತಾ ಬುದ್ಧಿ ಇದ್ರ ಈ ಇಂಗ್ರೇಜೇರ ರಾಜ್ಯೇವು ಬೂಮೀ ಮ್ಯಾಗ ಬರತಿದ್ದೀ ಇಲ್ಲ. ಸಾಹೇಬರಿಗೆ, ನಿಮಗ, ಗೌಡರಿಗೇ ಹೆದರಿಕೊಂತ ನೀವು ಹೇಳಿದಟ್ಟು ಹಣಾ ಕೊಟಗೊಂತ ಬಂದಲ್ಲೀ ಎಲ್ಲಾ ಹಾಳಾಗಿ ಹೋಗ್ಯೈತಿ. ಎಂದರ ನಿಮ್ಮುಂದ ಸುಳ್ಳ್ಯಾಕೇಳ್ತೇನ್ರಿಪ್ಪಾ? ಖರೇ ಹೇಳ್ರಿ ದ್ಯಾವ್ರು. ನಮ್ಮ ರೈತರು ಬೇಡಿದಾಗೆಲ್ಲಾ ಕೊಟಗೊಂತ ಬರದಿದ್ರ ನಮ್ಮ ಗೌಡ್ರು ಇಷ್ಟು ಸಾವ್ಕಾರಾಕ್ಕಿದ್ರ?

ಲೇಕಾರ:—ಹುರೇನ ಸಾಹೇಬ್ರ! ಹೋಗ್ಲಿ ಬಿಡ್ರಿ ಪಾಪ! ನಮಗ ಹೊತ್ತಾಗತೈತಿ ಗೌಡ್ರ ಮನೀಗೆ ಹೋಕ್ಕೇವಿ. ನೀವೂ ಬರ್ತೀರೇನ್ರಿ?

ಪೊಲೀಸ:—ನೀವು ಹೋಗ್ರಿ. ನನಗೆ ಸ್ವಲ್ಪ ಕೆಲ್ಸೈತಿ. ಇನ್ನೊಂದು ತಾಸ್ಗೆ ಚಾವಡೀ ಕಡೇನ ಬರತೇನಿ ಅಂತ ಹೇಳು ಗೌಡ್ರು ಕೇಳಿದ್ರ? (ಒಂದು ಕಡೆಯಿಂದ ಪೋಲೀಸನೂ ಮತ್ತೊಂದು ಕಡೆಯಿಂದ ಓಲೇಕಾರನೂ ಫಕ್ಕೀರನೂ ಹೋಗುವರು)

(ತೆರೆ ಏಳುವದು)

# ಮೂರನೇ ಪ್ರವೇಶ.

ಸ್ಥಳ:—ಗೌಡರ ಮನೆಯ ಮಹಾಲು.

(ಸುಂದರಾಸಾನಿಯು ಮಂಚದ ಮೇಲೆ ಕುಳಿತಿದ್ದಾಳೆ. ಹತ್ತರದಲ್ಲಿಯೇ ದುಂಡು ಮೇಜಿನ ಮೇಲೆ ತಾಂಬೂಲದ ತಟ್ಟು ಇಡಲಾಗಿದೆ.)

ಸುಂದರಾಸಾನಿ:—(ಸ್ವಗತ) ನಮ್ಮ ಗೌಡರ ಜಾಣತನಕ್ಕೆ ಎಣೆಯೇಯಿಲ್ಲ. ಬೇಕು ಇದಕ್ಕೂ ದೈವ ಬೇಕು. ಈ ಜಾಣತನವು ಎಲ್ಲರಿಂದಲೂ ಸಾಧಿಸಲಾರದು. ಇಷ್ಟು ಚಾತುರ್ಯವು ಅವರಲ್ಲಿದ್ದುದರಿಂದಲೇ ನನ್ನಂಥ ಸ್ವರ್ಗ ಸುಂದರಿಯನ್ನು ಸಂಪಾದಿಸಿರುವರು. ಯಾಕೆ? ಅವರಲ್ಲಿ ಯಾವ ಚಾತುರ್ಯವರುವಿದೆಂದು ಕೇಳುವಿರೇನು?

ನಿವೇ ವಿಚಾರ ಮಾಡಿರಿ. ಅವರಲ್ಲಿ ದುಡ್ಡೆತ್ತುವ ಈ ಕಲೆಯು ಇಲ್ಲದಿದ್ದಲ್ಲಿ ಇಷ್ಟು ಶ್ರೀಮಂತರಾಗುತ್ತಿದ್ದರೇನು? ಈ ಊರ ರಾಜರಾಗಿದ್ದಾರೆ. ರಾಜರು! ನಾನು ರಾಣಿಯು! ಗೌಡರ ಸರಕಾರೀ ಪ್ರೋಟಿಗೀ ನೋಡಿದರೆ ವರ್ಷಕ್ಕೆ ಎರಡ್ನೂರು ರೂಪಾಯಿ ಕೂಡಇಲ್ಲಾ. ಆದರೆ ಗೌಡರು ಗಳಿಸೋದು ಲೆಕ್ಕಪಿಲ್ಲದಷ್ಟು ರೂಪಾಯಿ. ನನಗೇ ಎರಡ್ನೂರು ರೂಪಾಯಿ ತಿಂಗಳಾ ಖರ್ಚಿಗೆ ಕೊಡುತ್ತಾರೆ. (ಸ್ವಲ್ಪ ತಡೆದು) ಆದಿರಲಿ. ಗೌಡ್ರು ಇಷ್ಟೊತ್ತಾದ್ರೂ ಯಾಕೆ ಬರಲಿಲ್ಲ?

ನಾಚು ನಾಚು ಎಂದು ಬಡಕೊಳ್ಳುವವರು. ಮಧ್ಯಾಹ್ನ ಊಟವಾಗಿ ತಾಸಾಯಿತು. ಇನ್ನೂ ವಿಶ್ರಾಂತಿಯ ಹೊತ್ತಾಗಲಿಲ್ಲವೇ?

( ಗೌಡರು ಪ್ರವೇಶಿಸುವರು. ಅವಳ ಮುಂದೆ ಬಂದು ನಿಂತು ಒಂದೇ ಸವನೆ ಅವಳ ಕಡೆಗೆ ನೋಡುತ್ತ ನಿಲ್ಲುವರು. )

ಸುಂದರಾ:- ಯಾಕೆ ಗೌಡರೇ? ಹೀಗೇಕೆ ಹುಚ್ಚರಂತೆ ನಿಂತಿರಿ?

ಗೌಡ:- ನನಗೆ ಹುಚ್ಚು ಹಿಡಿಸುವಂತಹ ನಿನ್ನ ರೂಪವನ್ನು ನೋಡುವದಕ್ಕೆಂದು?

ಸುಂದರಾ:- ಏನು ? ನನ್ನ ರೂಪ ನೋಡಿದಿರಾ? ಹೇಗದೆ ರೂಪ?

ಗೌಡ:— ( ಅವಳ ಬದಿಯಲ್ಲಿ ಕುಳಿತುಕೊಂಡು, ಕೈಯಿಂದ ಅವಳ ಗಲ್ಲವನ್ನು ಹಿಡಿದು ) ಅಹಹಾ ! ಸುಂದರಾಸಾನೀ ! ನಿನ್ನ ರೂಪವೇನು ಕೇಳುತ್ತೀ ? ಈ ಜಗತ್ತಿನಲ್ಲಿ ' ವಿಶ್ವಮೋಹಿನಿ ' ಯೆಂಬ ಅಗ್ರ ಪೂಜೆಯು ನಿನಗೊಬ್ಬಳಿಗೇ ಇರುತ್ತದೆ. ನೀನೇ ಧನ್ಯಳು. ನೀನೇ ಮಾನ್ಯಳು. ನಾಚುಮಾಡುವ ವಿದ್ಯೆಯಂತೂ ನಿನಗೆ ಚನ್ನಾಗಿ ಸಾಧಿಸಿದೆ. ಆ ವಿದ್ಯೆಯಿಂದ ನೀನು ಬೇಕಾದ ಪುರುಷರನ್ನು ಒಲಿಸಬಹುದು.

ಸುಂದರಾ:- ನನ್ನಂತೆಯೇ ನಿಮಗಾದರೂ ಒಂದು ವಿದ್ಯೆ ಒಳಿತಾಗಿ ಸಾಧಿಸಿರುವದು ಗೌಡರೇ ?

ಗೌಡ:— ಛೇ ! ಹುಡುಗಾಟಿಕೆ ಮಾಡಬೇಡಾ. ನಾನು ನಿರ್ಭಾಗ್ಯನಿರುವೆನು?

ಸುಂದರಾ:- ಹಾಗೆನ್ನಬೇಡರಿ! ನಿಶ್ಚಯವಾಗಿಯೂ ನೀವು ಭಾಗ್ಯವಂತರು.

ಗೌಡ: - ಸುಮ್ಮನೆ ಹೊಗಳಬೇಡ. ಅದಾವ ವಿದ್ಯೆ ಹೇಳು ನೋಡುವಾ.

ಸುಂದರಾ:- ನಾವು ಬೆಡಬೆಡಗಿನ ವೇಷಧಾರಣಮಾಡಿಕೊಂಡು ಜನರಿಂದ ರೊಕ್ಕ ಸೆಳೆಯುತ್ತೇವೆ. ನೀವು ನಾನಾ ತರದ ಬೆದರಿಕೆ ಹಾಕಿ ರೈತರಿಂದ “ ಲಂ ” ತಿನ್ನುತ್ತೀರಿ. ನನಗೆ ನಾಚು

ಮಾಡುವ ವಿದ್ಯೆ ಚನ್ನಾಗಿ ಗೊತ್ತಿದೆ. ನಿಮಗೆ ಜಬರುಮಾಡುವ ವಿದ್ಯೆ ಚನ್ನಾಗಿ ಗೊತ್ತಿದೆ. ರೈತರಿಂದ ನಿಮ್ಮಷ್ಟು ಲಂಚ ತಿನ್ನುವವರನ್ನು ನಾನೆಲ್ಲಿಯೂ ಕಂಡಿಲ್ಲ. ಅಂದ ಮೇಲೆ ನೀವು ನಿರ್ಭಾಗ್ಯರೋ? ನಾನು ನಿರ್ಭಾಗ್ಯಳೋ?

ಗೌಡಃ— (ಸ್ವಗತ) ಅಹುದು! ಇವಳೆನ್ನುವದೂ ನಿಜ! ನಾನೇನು ಕಡಿಮೆಯಾತನಲ್ಲ. ದಿನಾಲು ಹತ್ತಿಪ್ಪತ್ತು ರೂಪಾಯಿ ತಪ್ಪಿಯೇಯಿಲ್ಲ. (ಪ್ರಕಾಶ) ಸುಂದರಾಸಾನೀ! ನಾವಿಬ್ಬರೂ ಭಾಗ್ಯವಂತರೇ. ನಾವೂ ನೀವೂ ಜನರ ಹಣ ಅಪಹರಿಸುವದರಲ್ಲಿ ಒಂದೇ ತ:ಗತಿಯುವರಿದ್ದೇವೆ. ಆದರೂ ದುಡ್ಡನ್ನಲ್ಲದೆ ಜನರ ಮನವನ್ನೂ ತನುವನ್ನೂ ಸರ್ವಸ್ವವನ್ನೂ ಸೆಳೆಯುವ ನೀವು ನಮಗಿಂತ ದೊಡ್ಡವರು! ಅದಿರಲಿ ನನ್ನ.........

ಸುಂದರಾ:- ಅದಿರಲಿ ಏನು ಆದಿರಲಿ? ಇನ್ನೂ ಸಂಶಯುವೇ?

ಗೌಡಃ— ಇನ್ನೂ ಸಂಶಯುವಲ್ಲ! ಇನ್ನು ಮೇಲೆ ಸಂಶಯು.

ಸುಂದರಾಃ- ಎಲ್ಲಿಯ ಸಂಶಯು?

ಗೌಡಃ - ನನ್ನ ಈ ಜಾಣತನದ ಹಾದಿಯಲ್ಲಿ ಸಂಶಯು? ಮತ್ತು ಈ ನನ್ನ ದೊಡ್ಡಿಸ್ತಸನ ಮಾರ್ಗದಲ್ಲಿ ಸಂಶಯು.

ಸುಂದರಾಃ- ಅದೇಕೆ? ಅಂತಹ ಆಪತ್ತೇನು ಬಂದಿದೆ?

ಗೌಡಃ— ಗಾಂಧೀ ಚಳವಳಿಯೇ ವಿಪತ್ತಾಗಿಯೂ ಆಪತ್ತಾಗಿಯೂ ಬಂದಿದೆ.

ಸುಂದರಾ:- ಇಷ್ಟು ಮಾತ್ರಕ್ಕೆ ಬೆದರಿದಿರಾ? ಹಾಗೇ ಕೂಗತಾ ಇರುತ್ತವೆ 'ಜೈ' ಯೆಂದು ನರಿಗಳು. ನೀವದಕ್ಕೆ ಹೆದರಬೇಕೆ?

ಗೌಡಃ— ಸುಂದರೀ ನಿನಗೇನು ಗೊತ್ತು ಆ ವಿಷಯ? ಅವರ 'ಜೈ' ಎಂಬ ಧ್ವನಿಯು ನಮ್ಮನ್ನು 'ಥೈ' ಎಂದು ಕುಣಿಸುತ್ತದೆ. ಹೆದರಿಕೆ ಹಾಕುವದಾಯ್ತು, ಬೆದರಿಕೆಯಾಯ್ತು, ಬಂದೀಖಾನೆ ಆಯಿತು, ಹೊಡೆಯುವದಾಯಿತು, ಬಡಿಯುವದಾಯಿತು. ಚಿತ್ರ ವಿಚಿತ್ರ ಹಿಂಸೆಗಳೆಲ್ಲಾ ಆದವು. ಆದರಲ್ಲಿ ಈ

ಸಲದ ಚಳವಳಿಯು ಮೊದಲಿನಂತಹದಲ್ಲ. ಸಿಂದೀ ಗಿಡ ಕಡಿಯುವದು ಕಾಯ್ದೇ ಮುರಿಯುವದು, ಗೌಡರ ಮಾತೂ ಪೋಲೀಸರಮಾತೂ ಕೇಳಬ್ಯಾಡ್ರಿ ಅಂತ ಹೇಳೋದು ಇವೆಲ್ಲಾ ನಡೆದಿವೆ. ತುಂಬಿದ ಸಭೆಯೊಳಗೆ ದೊಡ್ಡ ದೊಡ್ಡ ಅಧಿಕಾರಿಗಳದೇ ಧೂಳಪಾರಿ ಹೋಗುತ್ತದೆ. ನಮ್ಮಂತಹ ಚಿಲ್ಲರೆ ಗೌಡರ ಕಿಮ್ಮತ್ತು ಕವಡಿಗೆ ಕಡಿಮೆಯಾಬಿಗಿಟ್ಟದೆ ಈ ಗಾಂಧಿಯ ಪೇಟೆಯಲ್ಲಿ ರೈತರ ಕೈಯಲ್ಲಿ ದುಡ್ಡಿಲ್ಲವಂತೆ. ಕರ ಬಂದಿ ಚಳವಳಿಯನ್ನೂ ಸುರುವು ಮಾಡಿದ್ದಾರೆ.

ಸುಂದರಾಃ- ಆದರೇನಾಯಿತು?

ಗೌಡಃ— ಆಗಬೇಕೇನು? ರೈತರೆಲ್ಲರೂ ನನ್ನ ವಿರುದ್ಧ ನಿಲ್ಲಹತ್ತಿದ್ದಾರೆ. ಇನ್ನು ಮೇಲೆ ನನ್ನನ್ನಾರು ಕೇಳಬೇಕು?

ಸುಂದರಾಃ- ಏನೇ ಅನ್ನಿರಿ ಗೌಡರೇ? ನೀವು ಚೆನ್ನಾಗಿ ಬೆದರಿಕೆ ಹಾಕುವದಿಲ್ಲವೆಂದು ಕಾಣುತ್ತದೆ, ನಿಮ್ಮ ಮಾತಿನ ಮೇಲಿಂದ? ಅಂತೆಯೇ ಈ ಊರಲ್ಲಿ ಇನ್ನೂ ಯಾರೂ ಹಪ್ತೇ ಕೊಟ್ಟಿಲ್ಲ. ಅಂಥವರ ಮನೆ ಜಪ್ತೀ ಏಕೆ ಮಾಡಬಾರದು?

ಗೌಡಃ— ಆಹುದು! ಸುಂದರಾಸಾನಿ! ನಿನ್ನ ಸೂಚನೆಯು ಸರಿಯಾಗಿದೆ. ಇನ್ನು ಮೇಲೆ ಜಪ್ತೀ ಮಾಡುವದನ್ನೂ ಲಾಠೀ ಏಟು ಹಾಕಿಸುವದನ್ನೂ ಜೋರಿನಿಂದ ಕೈಕೊಳ್ಳಲೇಬೇಕು ಅದಿರಲಿ! ( ಅವಳ ಹೆಗಲಮೇಲೆ ಕೈ ಹಾಕಿ ಗೋಣಲ್ಲಾಡಿಸುತ್ತ ) ಸುಂದರವಾದ ನರ್ತನೆಯೊಂದನ್ನು ಮಾಡಿ ನನ್ನ ಮನಸ್ಸನ್ನು ಸಮಾಧಾನಗೊಳಿಸುವಿಯಾ?

ಸುಂದರಾಃ- ಯಾಕಾಗಲೊಲ್ಲದು ಪ್ರಿಯಾ! ತಮ್ಮ ಮನಸ್ಸಿನ ವಿರುದ್ಧ ಎಂದಾದರೂ ವರ್ತಿಸಿರುವೆನೇ ?

( ನಾಚು ನಡೆಯುವದು. ಸ್ವಲ್ಪ ಹೊತ್ತಿನ ಮೇಲೆ ಓಲೇಕಾರನು ಹೊರಗೆ ನಿಂತುಕೊಂಡೇ )

ಓಲೆಕಾರಃ- ರಾಯರ! ರಾಯರ!

ಗೌಡಃ— ಯಾರವರು ? ಬಿಸಿಲೊತ್ತಿನಲ್ಲಿ ಏನೋ ಅದು ಕಟಕಿಟ?

(ಬಾಗಿಲ ಬಳಿಗೆ ಹೋಗುವನು.)

ಓಲೇಕಾರಃ- ಫಕ್ಕೀರನ್ನ ಕರಕೊಂಡು ಬಂದೇನ್ರಿ ಧಣೇರು. ಬಂದ್ಮ್ಯಾಡ್ಲೆ ತಿಳಿಸಾಕ ಹೇಳಿದ್ರೆಲ್ಲಪ್ಪಾ?

ಗೌಡ:— ಉಂಡೇ ಬಾ ಅನ್ನು ಫಕ್ಕೀರಗೆ.

ಓಲೇಕಾರಃ- ಉಂಡೇಬಂದಾನ್ರಿಯಪ್ಪಾ. ಬಂದು ಬಾಳೊತ್ತಾಗಿತ್ತು. ನೀವೂಇದ್ದಿಲ್ಲಾ. ಉಣ್ಣಾಕಕಳ್ಸಿದ್ದೆ.

ಗೌಡ :— ಒಳ್ಳೇದು. ಬಂದೆ ನಡಿ. ಫಕ್ಕೀರಗ ಚಾವಡಿಗೆ ಹೋಗಾಕ ಹೇಳು. ಶಾನಬೋಗರ ಮನಿಗೆಹೋಗಿ ನಾ ಕರ್ದೇನಂತ ಹೇಳಿ ನಿನೂ ಗಡಾ ಬಾ. (ಎಂದು ಹೇಳಿ ಸುಂದರಾಸಾನಿಯ ಬಳಿಗೆ ಬರುವನು. ಓಲೇಕಾರನು ಹೋಗುವನು)

ಗೌಡ:— ಸುಂದರಾಸಾನಿ! ನನಗಿಂದು ಜರೂರ ಕೆಲಸವಿದೆ ಹೋಗಿ ಬರುತ್ತೇನೆ. (ಹೊರಡುವನು)

ಸುಂದರಾ:- ( ಬಾಗಿಲ ವರೆಗೆ ಗೌಡನನ್ನು ಹಿಂಬಾಲಿಸಿ ) ನಾನು ಹೇಳಿದಂತೆ ಮಾಡಲಿಕ್ಕೆ ಮರೆಯ ಬೇಡಿರಿ.

ತೆರೆಬೀಳುವದು.

# ೪ ನೇ ಪ್ರವೇಶ

ಸ್ಥಳ :— ಒಂದು ಬೀದಿ.

( ಓಲೇಕಾರನು ಪ್ರವೇಶಿಸುವನು)

ಓಲೇಕಾರಃ—ಥೂ! ಅವರ ಮಾರಿಗೆ ಬೆಂಕೀ ಹಚ್ಚಾ! ಏನಪಾ ನಮ್ಮ ಗೌಡ್ರು ? ಮುತ್ತಿನಂತಾ ಹ್ಯಾಣತೀ ಬಿಟ್ಟುಕ್ಯಾಸ ಸುಂದರಾ ಸಾಣೆಂತ? ಏನು ಚೆಲುವೆಪಾ ? ಅವಳ್ನಿಟಗೊಂಡು ಹಗ-ಲಿಲ್ಲಾ ರಾತ್ರಿಲ್ಲಾ ಬ್ಯಾರೀಕಾಲಾ ನಾಚು ಮಾಡ್ತೋದ್ರಾಗ ಇರತಾರು. ಆ ಹಾದರಗಿತ್ತಿಗೊಂದು ಕುಣ್ಯಾಕಬರ್ತೈತಂತ! ಥಕ್ಕ ಥಕ್ಕ ಥೈಯ್ಯ ತೈಯ್ಯ ಕುಣ್ಯೋದ್ರಾಗ ಇರ್ತೈತಿ. ಥೂ ಇವರ ಮನೀ ಹಾಳಾಗಾ. ( ಹೊರಡುವನು. ಅತ್ತಕಡೆಯಿಂದ ತನ್ನ ಹೆಂಡತಿ ಬರುವದನ್ನು ಕಂಡು ಅಲ್ಲಿಯೇ

ನಿಲ್ಲುವನು) ಯಾರವರು ? ನನ್ನ ಡಗಿಣೇನ ಇತ್ತಾಗ ಬರಾಕ ಹಂತ್ರ್ಯೆತೆಲ್ಲ? ಪೀರ್ಗ್ಯಾ ನೀನೇಲಾ ಸರದಾರಮಗಾ. ಶಿರಿ ಮಂತ್ರ್ಯರ ಈಟು ದಾಗೀಣೇ ಮಾಡ್ಯಾರೇನು ಹೆಂಡರ ಮೈ ಮ್ಯಾಗ? ಏನೆ ಅನ್ರಿ- ಗಾಂಧೀ ಮಾರಾಯಾ ಚಳವಳೀ ಮಾಡಿ ನಮಗ ಸುಕಾ ಮಾಡಿದಾ ಜಪ್ತೀ ಮಾಡಿದ್ದಾಗಿಣೇ ಮಂದಿ ಹಿಡ್ಯಾಣೆಲ್ಲ. ನಾ ಬಿಡಾಣೆಲ್ಲ. ಉದ್ರೀ ಸುದ್ದಾ ಕೊಡತಾರು ನಮ್ಮ ಗೌಡ್ರು ಅಂದವ್ಯಾಗ ಯಾರು ಬಿಡತಾರ್ರೀ ?

(ಹೆಂಡತಿಯು ಪ್ರವೇಶಿಸಿ)

ಹೆಂಡತಿ:— ಏಟು ಹುಡಿಕ್ಯೇದು ನಿನ್ನ ? ಚಾವಿಕ್ಕ ಕಡ್ಡೇ ಹೋಗಿದ್ದೆ ಅಲ್ಯೊ ಇದ್ದಿಲ್ಲ ?

ವಾಲೀಕಾರ:—ಅಂತಾದೇನು ಅಡಗಾಣಿಸಿತ್ತು ? ಇಟ್ಟು ದೌಡಲೇ ಹುಡಕಾಕ ?

ಹೆಂಡತಿ:— (ಕಿವಿಯಲ್ಲಿ ಹೇಳುವಳು ಏನೇನೋ)

ವಾಲೀಕಾರ:—ಕೇಳಾಕ ಇಲ್ಯಾರದಾರು ? ಒದರಿ ಹೇಳು ಕೇಳ್ಸೊಹಾಂಗ.

ಹೆಂಡತಿ:— ಮನ್ನೆ ಶಾಮರಾಯ್ರ ಮನೀ ಜಪ್ತೀ ಮಾಡಿದಾಗ ಬಂಗಾರ ಪಟ್ಟಿ ಇತ್ತಂದಿದ್ರೆಲ್ಲಾ. ಅದನ್ನಿವತ್ತು ಲೇಲಾಮಿನ್ಯಾಗ ಬಿಡಬ್ಯಾಡ್ರಿ. ಬಾಳು ಚಂದೈತದು?

ವಾಲೀಕಾರ:—ಗೊಂತಾತು ಬಿಡು. ನನಗ್ಹೇಳಾಕ ಬೇಕೇನು? ನಿನ್ನ ದಾಗೀಣೇ ನೋಡಿ ಮಂದೀ ಬಾಯಾಗ ನೀರ್‍ಬಿಡ್ತಾವು ನಡೀ ಮನಿಗೆ [ ಇಬ್ಬರೂ ಹೋಗುವನು.]

ತೆರೆ ಏಳುವದು.

## ೫ ನೇ ಪ್ರವೇಶ

ಸ್ಥಳ:— ಚಾವಡಿ ನಾಲ್ಕು ಜನ ಪೋಲೀಸರೂ ವಾಲೀಕಾರನೂ ಬಾಕಿನ ಮೇಲೆ ಕುಳಿತಿದ್ದಾರೆ. ಮತ್ತೊಂದು ಬಾಕಿನ ಮೇಲೆ ಕೆಲವು ಪ್ರೇಕ್ಷಕರು ಕುಳಿತಿದ್ದಾರೆ. ಹಾಸಿದ ಗುಡಾ

ರದ ಮುಂಭಾಗದಲ್ಲಿ ರೈತರು ಕೆಲವು ಮಂದಿ ಕುಳಿತಿದ್ದಾರೆ. ಗೌಡರು ಪ್ರವೇಶಿಸುವರು. ಚಾವಡಿಯ ಹೊರಗೆ ಲಿಲಾವಿನ ಸುದ್ದಿಯನ್ನು ಕೇಳಿ ಈ ಮೊದಲೇ ಕೆಲವು ಸ್ವಯಂಸೇವಕರು ಬಂದು ನಿಂತಿದ್ದಾರೆ. )

ಒರ್ವ ಸ್ವಯಂಸೇವಕಃ— ಇವತ್ತಿನ ದಿವಸ ಸಾಯಂಕಾಲ ೬ ಗಂಟೆಗೆ 'ಗಾಂಧೀಬಾಗ' ದಲ್ಲಿ ಬಡ ರೈತರ ಸಂಬಂಧೀ ಲೆಕ್ಚರ ಆಗುತ್ತದೆ. ದಯುಮಾಡಿ ಎಲ್ಲರೂ ಬನ್ನಿರಿ! (ತುತೂರೀ ಊದುವನು)

ಗೌಡಃ— ಪೋಲೀಸ ಕ್ಯಾದೇಖತಾಹೈ ಪಕಡೋ ಉಸ್ಕೊ

ಸ್ವ. ಸೇವಕ- ಪೋಲೀಸನಿಗೇಕೆ ತೊಂದರೆ? ನಾನೇ ಬಂದೆ ಹಿಡಿಯಿರಿ.

( ಒಳಗೆ ಬರುವನು ಪೋಲೀಸರು ಕೈಯಲ್ಲಿ ಬೇಡಿಹಾಕುವರು. ತುತೂರಿ ಕಸಿದುಕೊಳ್ಳುವರು ಆದರೆ ಇಷ್ಟರಲ್ಲಿಯೇ ಹೊರಗೆ ನಿಂತ ಎಲ್ಲ ಸ್ವಯಂಸೇವಕರೂ )

ಎಲ್ಲ ಸ್ವ.ಸೇವಕರೂಃ— ಇವತ್ತಿನ ದಿವಸ 'ಗಾಂಧೀ ಬಾಗ' ದಲ್ಲಿ ರೈತರ ಸಂಬಂಧೀ ವ್ಯಾಖ್ಯಾನವಾಗುವದು. ಎಲ್ಲರೂ ಬನ್ನಿರಿ! ( ಬೊಬ್ಬೆ ಹೊಡೆಯುವರು. )

ಗೌಡಃ— [ಹೌಹಾರಿ] ಬೊಬ್ಬೇ ಹೊಡೆಯುತ್ತಿರಲೊಲ್ಲರೇಕೆ? ನಾವು ನಮ್ಮ ಕೆಲಸಕ್ಕೆ ಆರಂಭ ಮಾಡುವಾ. ಶ್ಯಾನುಭೋಗರ್ನ ಕರೀಲಿಲ್ಲೇನೋ ಪೀರ್ಯಾ?

ಓಲೇಕಾರಃ- ಅವರು ತಮ್ಮ ಕಾಗದ ಪತ್ರದ ಗಂಟು ಕೊಟ್ಟಾರ್ರಿ ನನ್ನ ಕೈಯಾಗ ಅವರ್ಗೆ ಜರಾಬಂದಾವು ನಾಳೆ ಬರ್ತಾರಂತ್ರಿ [ ಗಂಟು ಮೇಜಿನ ಮೇಲೆ ಇಡುವನು ]

[ ಗೌಡನು ಆ ಗಂಟನ್ನು ಬಿಚ್ಚುವನು ]

ಗೌಡಃ— ಕೇಳ್ರಿಪಾ! ಮಾಮಲೇದಾರ ಉತ್ತರನಕಾ ಹೀಂಗ ಬಂದೈತಿ ಅದರಂತೆ ನಡ್ಯಾಕ ಬೇಕು. ನಿವೆಲ್ಲಾ.

ಫಕ್ಕೀರಃ— ಏನ ?

ಗೌಡ—(ಓದುವವನಂತೆನಟಿಸಿ) ಈವರ್ಷ ಎಲ್ಲಾರಕಡಿಂದನೂ ಹಪ್ತೇವು ವಸೂಲ ಮಾಡಬೇಕು. ಕೊಡದಿದ್ದರ ಜಪ್ತೀಮಾಡಿ ವಸೂಲಮಾಡ್ತೇವಂತಾ ಕಡಕ ಉತ್ತರಾ ಬರದಾರು. ಅದಕ ನೀವು ಎಲ್ಲಾರೂ ಯಾಡ ಮೂರು ದಿನದಾಗ ತಂದು ಕೊಡಾಕಬೇಕು.

ಫಕ್ಕೀರ— ಹೊಟ್ಟಿಗೆ ಕೂಳಿಲ್ರಿ ದ್ಯಾವ್ರು ಈ ವರ್ಷ ಕೊಡೋಣಾಗೋಣಿಲ್ರಿ. ಜಪ್ತೀಮಾಡಿ ಸುಮ್ಮಕೇ ನಮ್ಮನ್ನ ಕೊಲ್ಲಬ್ಯಾಡ್ರಿ.

ಎಲ್ಲ ರೈತರೂ— ಕಾಲ್ಬೀಳತೇವ್ರಿ ಗೌಡರ! ಇದೊಂದು ವರ್ಷ ಹ್ಯಾಂಗರ ಮಾಡ್ರಿಯಪ್ಪಾ.

ಗೌಡ— ………… ಮಕ್ಕಳಿರಾ ಡೌಲು ಬಡಿಬ್ಯಾಡಿರಿ. ಗಾಂಧೀ ಮಂದೀ ಮಾತು ಕೇಳಿ ಇಷ್ಟೆಲ್ಲಾ ಹಾರಾಡ್ತೀರಿ ಹೌದ? ಪೋಲೀಸ ಪಾರ್ಟೀ ಬಂದೈತಿ ನೆಪ್ಪಿನ್ಯಾಗ ಇಡ್ರಿ. ಕುಂಡೀ ಮ್ಯಾಗ ಏಟು ಬೀಳಾಕ ಹತ್ತಿದವಂದ್ರ ತಿಳೀತೈತಿ. ಆಗ ಬರ್ತಾರಂತ ಮಾಡಿರೇನು, ಚಳವಳೀ ಮಂದಿ ಬಿಡಸಾಕ?

ಫಕ್ಕೀರ— ಅಪನೋರ! ಸಿಪಾಯ್ರು ಹೊಡ್ದೂ ಬಡ್ದೂ ಮಾಡಿದ್ರರ ದುಡ್ಡು ಎಲ್ಲಿಂದ ಬರ್ತೈತ್ರೀ? ಸುಮ್ನ ಅನಾಸ್ತಿ ಮಾಡಬ್ಯಾಡ್ರಿಯಪ್ಪಾ ನಮ್ಮ ಜನ್ಮಾ

ಗೌಡ— ಫಕ್ಯಾ, ಎಲ್ಲಾರ್ಗಿಂತಾ ನಿಂದೇ ಬಾಳ್ಯಾಕಣ್ತೈತಿ? ( ಪೋಲೀಸರ ಕಡೆಗೆ ಮೋರೆ ಮಾಡಿ ) ಹುಶೇನ್ ಸಾಹೇಬ್ರೇ ನಾಳೆ ಸಾಯಂಕಾಲದೊಳಗೆ ಫಕ್ಕೀರ ಹಪ್ತೆ ತಂದು ಕೊಡದಿದ್ದರ ಅವನ ಮನೀ ಜಪ್ತೀ ಮಾಡ್ಬಿಡ್ರಿ.

ಫಕ್ಕೀರ—[ ಸ್ವಗತ ] ಶಿವ ಶಿವಾ! ರೈತರ ಮ್ಯಾಗ ಎಂತಾ ಪರಸಂಗ ಬಂತಪ್ಪಾ? ನಮ್ಮ ಅನ್ನಾ ಉಂಡು ನಮ್ಮ ಮ್ಯಾಗೇ ತಿರುಗಿಬೀಳ್ತೈತಲ್ಲಪ್ಪ ಈ ಸರಕಾರ! ಯಾವಾಗ ಈ ಅನ್ಯೇದ ರಾಜ್ಯೇವು ಹಾಳಾಗಿ ಹೋಕ್ಕೈತೋ ಏನೋ? [ ಎಲ್ಲ ರೈತರೂ ಹೊರಡುವರು ]

ಲಿಕಾರ— ಇನ್ನ್ಯಾಗ ಲಿಲಾವಾಕ್ಯಾವು ಹೋಗಬ್ಯಾಡ್ರಿ ಕುಂಡ್ರಿಪೋ.

ಫಕ್ಕೀರ—[ ಬಾಗಿಲ ವರೆಗೆ ಹೋದ ಬಳಿಕ ರೈತರ ಕಡೆಗೆ ನೋಡುತ್ತ ] ನಡಿರಲೇ. ಏನ್ನೋಡ್ತೀರಿ? ಜೇಬಸೀರ್ ಮಕ್ಕಳು ನಮ್ಮ ನಿಮ್ಮಂ

ತಾ ಬಡಬಗ್ಗರ ಬದಕು ಜಪ್ತೀ ಮಾಡಿ ತಂದಾವು. ಅದನ್ನೇನೋ ಲೇಲಾಮು ಮಾಡ್ತಾರಂತ. ಕೊಲ್ಲಾಕೇ ತಯಾರಾಗಿ ನಿಂತಾರು ಮಾರಾಯ್ರು. ನೋಡಿದ್ರ್ಯಾ ರಾಮರಾಯ್ರೂ, ಬಸಪ್ಪ, ಭರಮಪ್ಪ, ಅವರೂ ನಮ್ಮಾಂಗ ಅರ್ಜಿ ಮಾಡಿದ್ರು ಆದರೇನೋ ಅವರು ಗಾಂದೀ ಮಂದಿ ಜೋಡಿ ಗಿಡಾ ಕಡ್ಯಾಕ ಹೋಗಿದ್ದರಂತ ಅದಕ ಮೊದಲೇ ಜಪ್ತೀ ಮಾಡ್ಯಾರು. ನೋಡಲಾ! ಬಂಗಾರ ಪಟ್ಟೇಸುದ್ಧಾ ಲೇಲಾಮಿಗೆ ತಂದಾರು. [ ಹೋಗುವರು ]

ಸ್ವ. ಸೇವಕ—[ ಹೊರಗಿನಿಂದ] ಓ! ಯಜಮಾನರೇ! ಕೈಕಾಲ್ಬೀಳ್ತೇವಿ! ಬಡವರ ಬದಕು ಯಾರೂ ತಗೋಬ್ಯಾಡ್ರಿ.

ಗೌಡ— ಬಂಗಾರದ ಪಟ್ಟೇ! ಹತ್ತ್ರೂಲೀ ಬಂಗಾರದ್ದೈತಿ. ಆ ಮೇಲೆ ಸಿಗಲಿಕ್ಕಿಲ್ಲ. ಯಾರಿಗ್ಬೇಕು ಬೇಡಿರಿ. ಸರಕಾರೀ ಸವಾಲು ಎರಡು ನೂರು ರೂಪಾಯಿ.

[ ಪ್ರೇಕ್ಷಕರಾಗಿ ಬಂದ ಜನ ಸಮೂಹದಲ್ಲಿ ಜಾಹಗೀರದಾರರೂ ಇದ್ದರು ]

ಜಾಹಗೀರದಾರ— ಹತ್ತುರುಪಾಯಿ.

ಸ್ವಯಂಸೇವಕ— ( ಹೊರಗಿನಿಂದ ) ಜಾಹಗೀರದಾರ! ಸಾಮಾನು ತಗೋಬ್ಯಾಡ್ರಿ! ನಮ್ಮನ್ನು ತುಳಕೋತ ಹೋಗಬೇಕಾದೀತು. ನೋಡಿರಿ. ವಿಚಾರ ಮಾಡಿರಿ. ಆಶೆಗೆ ಬೀಳಬೇಡಿರಿ.

ಗೌಡ— ಹತ್ತು ರೂಪಾಯಿ! ಜಾಹಗೀರದಾರ ಸವಾಲು ಹತ್ತುರೂಪಾಯಿ ಒಂದ್ಸವಾಲ್!

ಓಲೇಕಾರ— ಹದಿನೈದು ರೂಪಾಯಿ

ಜಾಹಗೀರ— ಇಪ್ಪತ್ತು ರೂಪಾಯಿ

ಸ್ವ. ಸೇವಕ— [ ಹೊರಗಿನಿಂದ ] ಎಷ್ಟ್ಹೇಳಬೇಕ್ರೀ ಜಾಹಗೀರದಾರ! ನಮ್ಮಾತು ಒಂದಿಷ್ಟು ಕೇಳಿರಿ. ಬಡವರ್ನ ಕೊಲ್ಲಬ್ಯಾಡ್ರಿ.

ಜಾಹಗೀರ— [ ಸ್ವಗತ] ಇದರ ಆಶೆಯೂ ಬೇಡ ಜನರಲ್ಲಿ ನನ್ನ ಅವಮಾನ ಆಗುವದೂ ಬೇಡ,

ಗೌಡ— ಇಪ್ಪತ್ತು ರೂಪಾಯಿ ಜಾಹಗೀರದಾರ ಸವಾಲು. ಒಂದುಸಾರೆ, ಏಕ್ ಸವಾಲ್

ಓಲೇಕಾರ— ಇಪ್ಪತ್ತೈದು ರುಪಾಯಿ
ಗೌಡ— ಇಪ್ಪತ್ತೈದು ರೂಪಾಯಿ ಪೀರ್‍ಯಾನ ಸವಾಲ್ ಒಂದುಸಾರೆ, ಎರಡು ಸಾರೆ, ಇಪ್ಪತ್ತೈದು ರೂಪಾಯಿ ಮೂರುಸಾರೆ [ ಪೀರ್‍ಯಾನ ಕಡೆಗೆ ಕೊಡಲಿಕ್ಕೆ ಕೈಮಾಡುವನು ಪೀರ್‍ಯಾಎದ್ದುಬಂದು ತೆಗೆದುಕೊಳ್ಳುವನು. ಗೌಡನು ಅದರ ಕಿಮ್ಮತ್ತು, ಅವನ ಹೆಸರು ಎಲ್ಲ ಬರೆದುಕೊಂಡು ಆ ಮೇಲೆ ]
ಗೌಡ— ಇವತ್ತು ಜನರೂ ಬಹಳ ಬಂದಿಲ್ಲ. ನಾಳೆ ಎಲ್ಲರೂ ಮತ್ತೆ. ಬನ್ನಿರಿ ( ಪ್ರೇಕ್ಷಕರೆಲ್ಲರೂ ಹೊರಡುವರು.)

[ ತೆರೆ ಬೀಳುವದು. ]

## ೬ ನೇ ಪ್ರವೇಶ

(ಸಳ: ಲೈನ ಮಾರ್ಗ)

(ಸ್ವಯಂಸೇವಕನೊಬ್ಬನು ಮಾರ್ಗ ನಿರೀಕ್ಷಣೆ ಮಾಡುತ್ತ ಕುಳಿತಿದ್ದಾನೆ.)
ಸ್ವ. ಸೇವಕ (ಸ್ವಗತ) ನಾನು ಬಂದು ಎರಡು ತಾಸಾಗುತ್ತ ಬಂದಿತು. ಇನ್ನೂ ಇವರ ಪಥಕವು ಏಕೆ ಬಂದಿರಲಿಕ್ಕಿಲ್ಲ? ಪೋಲೀಸರಿಗೆ ಈ ವಿಷಯವಾಗಿ ಗೊತ್ತಾಗಿರಬಹುದೇನು? ಅವರನ್ನು ಇನ್ನೂ ಹಿಡಿದಿರಲಿಕ್ಕಿಲ್ಲವಷ್ಟೇ? ಅದನ್ನೂ ಹೇಳಲಿಕ್ಕೆ ಬರುವಂತಿಲ್ಲ. ನಮ್ಮ ಸರಕಾರವು ದೇಶ ಸೇವಕರನ್ನು ಹಿಡಿಯುವದರಲ್ಲಿಯೂ, ಬಡಜನರಿಗ ತೊಂದರೆ ಕೊಡುವದರಲ್ಲಿಯೂ ಬಹಳ ಹುಷಾರಿ! ಬಡವರು ಕೂಳಿಲ್ಲದೆ ಸತ್ತರೂ ಅಡ್ಡಿಯಿಲ್ಲ. ತಮ್ಮ ಚೈನಿಗೆ ಕಡಿಮೆ ಆಗಬಾರದೆಂದು ಅವರ ತತ್ವ. ರೊಕ್ಕದ ಸಲುವಾಗಿ ಬೇಕಾದ ಅನ್ಯಾಯ ಮಾಡಲಿಕ್ಕೆ ಸಿದ್ಧರಿದ್ದಾರ. (ಸ್ವಲ್ಪ ತಡೆದು) ಅಗೋ! ದೂರದಲ್ಲಿಯಾರೋ ಬರುತ್ತಿರುವಂತೆ ಕಾಣುತ್ತದೆ. (ಹಣಿಕಿನೋಡಿ) ಅಹುದು! ಅವರೇ ನಮ್ಮ ಅಂಕೋಲೆಯ ಪಥಕದವರೆಂದು ಕಾಣುತ್ತದೆ. ಸಮೀಪದಲ್ಲಿಯೇ ಬಂದರು. ಅವರನ್ನು ಸನ್ಮಾನಪೂರ್ವಕವಾಗಿ ಕರೆದುಕೊಂಡು ಹೋಗುವಾ.

( ಪಥಕವು ಬರುವದು. ಸ್ವಯಂಸೇವಕನು ಅವರ ಮುಖಂಡನಿಗೆ ನಮಸ್ಕಾರ ಮಾಡುವನು. )

ಮುಖಂಡ- ಏನಯ್ಯಾ! ವಿಶೇಷ ಸಮಾಚಾರ?

ಸ್ವ. ಸೇವಕ- ಏನು ಹೇಳಲಿ ಸ್ವಾಮೀ, ಸರಕಾರದ ಆಸುರೀ ಕೃತ್ಯ! ಹತ್ತು ಇಪ್ಪತ್ತು ದಿನಗಳಾದವು. ಈ ಊರಿಗೆ ಪೋಲೀಸರದೊಂದು ದೊಡ್ಡ ಪಾರ್ಟಿಯೇ ಬಂದು ಬಿಟ್ಟಿದೆ. ದರೋಡೆ ಮಾಡುವವರಂತೆ ಭಯಂಕರವಾಗಿ ಜಪ್ತೀ ಮಾಡಹತ್ತಿದ್ದಾರೆ. ಹೆಂಗಸರ ಮೈಮೇಲೆ ಏರಿಹೋಗುವದೂ, ಬಡರೈತರನ್ನೂ ಅವರ ಮಕ್ಕಳನ್ನೂ ಮನ ಬಂದಂತೆ ಲಾಠಿಯಿಂದ ಹೊಡೆಯುವದೂ ನಡಿದೇ ಇದೆ. ನಮ್ಮೂರ ಗೌಡನ ದರ್ಬಾರವೆಂದರೆ ಯಮರಾಜನ ದರ್ಬಾರಕ್ಕಿಂತಲೂ ಮಿಗಿಲಾಗಿ ಹೋಗಿದೆ.

ಮುಖಂಡ- ಒಳ್ಳೇದು! ರೈತರ ಅಭಿಪ್ರಾಯವೇನಿದೆ. ತಮ್ಮಾ! ಅವರು ತಮ್ಮ ನಿಶ್ಚಯವನ್ನು ಸಡಿಲು ಪಡಿಸಬೇಕೆನ್ನುವರೋ?

ಸ್ವ. ಸೇವಕ- ಇಲ್ಲ ಸ್ವಾಮೀ, ಕಲಿತ ಜನರಿಗಿಂತಲೂ ರೈತರಲ್ಲಿ ಹೆಚ್ಚು ದೇಶಾಭಿಮಾನವಿದೆ. ತಾವು ಎತ್ತಿದ ಕರನಿರಾಕರಣೆಯ ಶಸ್ತ್ರವನ್ನು ಕೆಳಗೆ ಇಡಲಿಕ್ಕಿಲ್ಲವೆಂದು ಪ್ರತಿಜ್ಞೆಯನ್ನೇ ಮಾಡಿದ್ದಾರೆ. ಕೆಲವರು ಮಾತ್ರ ತಮ್ಮ ಹೆಂಡರು ಮಕ್ಕಳಿಗೆ ಸರಕಾರದವರು ಕೊಡುವ ಉಪದ್ರವನ್ನು ಸಹಿಸಲಾರದೆ ಸಾಲತೆಗೆದು ಕರ ಕೊಡುವ ವಿಚಾರದಲ್ಲಿದ್ದಾರೆ.

ಮುಖಂಡ- ಒಳ್ಳೇದು ನಡೆಯಿರಿ ಶಿಬಿರಕ್ಕೆ ಹೋಗುವಾ. ಆಮೇಲೆ ವಿಚಾರ ಮಾಡೋಣ. ಶಿಬಿರವು ದೂರದಲ್ಲಿರುವದೋ?

ಸ್ವ. ಸೇವಕ- ಇಲ್ಲಿಯೇ ಸಮೀಪದಲ್ಲುಂಟು; ನಡೆಯಿರಿ ಹೋಗುವಾ.

(ಹೋಗುವರು)

ತೆರೆ ಏಳುವದು.

# ೭ ನೇ ಪ್ರವೇಶ

ಸ್ಥಳ:-( ಪಕ್ಕೀರನ ಮನೆ ಒಂದು ಬದಿಗೆ ಬಾಗಿಲವಿದೆ. ಹೊರಗೆ ಎಲ್ಲನು ಗುಂಡಿನಾಟವಾಡುತ್ತ ಕುಳಿತಿದ್ದಾನೆ ಪೋಲೀಸ ಪಾರ್ಟಿಯೊಂದು ಪ್ರವೇಶಿಸುವದು.)

ಪೋಲೀಸ:— ಎಲೋ ಹುಡುಗಾ ನಿಮ್ಮಪ್ಪನ ಕರೀ ಹೊರಗ.

ಯಲ್ಲ:— ನಮ್ಮಪ್ಪನ್ನ ಯಾಕ ಕರೀಬೇಕ್ರೀ, ಅವೇನ್ ತುಡಗುಗಿಡಗು ಮಾಡ್ಯಾನೇನು?

ಪೋಲೀಸ:— ನಿನಗ್ಯಾಕ ಬೇಕಲೆ ಅದೆಲ್ಲಾ ಪಂಚೈತಿ.? ಕರೀ ಅವನ್ನ?

ಯಲ್ಲ:— ನಾಏನ, ನಿಮ್ಮ ಆಳ್ಗೀಳಲ್ಲಾ ?ಕರೀರಿ ಬೇಕಾದ್ರ?

ಪೋಲೀಸ:— ಸೊಕ್ಕು ಬಂದಿರುವದದೇನು? (ಬಡಿಗೆಯಿಂದ ಹೊಡಿಯುವನು) (ಚಿನ್ನವ್ವನು ಸಪ್ಪಳ ಕೇಳಿ ಹೊರಗೆ ಬರುವಳು)

ಚಿನ್ನವ್ವ;— ಯಾಕ್ರೆಲಾ ನನ್ನ ಕೂಸಿನ್ನ ಯಾಕ ಹೊಡೀತೀರಿ?

ಪೋಲೀಸ. ನಿನಗೂ ಎರಡು ಕೊಟ್ಟೇವು ಸುಮ್ಮನ ಹಪ್ತೇದ ಹಣಾ ಕೊಡು. ಇಲ್ಲದಿದ್ದರ ಮನಿ ಜಪ್ತೀ ಮಾಡಿ ಬಟ್ಟೇವು.

ಚಿನ್ನವ್ವ—ಬೇಸಿ ಕಲ್ತೀರಿ. ನಿಮ್ಮ ಸರಕಾರದ ಹುಕುಂ ಹಿಂಗೇ ಐತೇನು? ಗಂಡಸೂರು ಇರ್ಲೀ ಬಿಡ್ಲೀ ಬರೋದೇ ಏನು? ಬೇಸಿ ಬಾಳೇವು ಮಾಡ್ತೀರಿ. ನಾ ಕೊಡೊವ್ಳೋ ನನ್ನ ಹಿರ್‍ಯಾ ಕೊಡವ್ನೊ ಹಪ್ತೇವು?

ಪೋಲೀಸ:— (ಎಲ್ಲ ಪೋಲೀಸರನ್ನು ಕುರಿತು) ಒದರತಿರ್‍ತಾಳ ನಡ್ರಿ ಒಳಗೆ. ಜಪ್ತೀ ಮಾಡ್ರಿ.

ಚಿನ್ನವ್ವ:— (ಬಾಗಿಲಲ್ಲಿ ಅಡ್ಡ ಬಿದ್ದು) ನನ್ನ ತುಳಕೊಂತ ಹೋಕ್ಕಿದ್ರ ಹೋಗ್ರಿ ವಳ್ಯಾಕ. ಮಾದೇವ್ರು ನಿಮ್ಮ ಗತೀ ನೆಟ್ಟಗ ಮಾಡಾಕಿಲ್ಲ ನೆಪ್ಪಿನ್ಯಾಗ ಇಟಗೊಂಡು ಬಾಳೇ ಮಾಡ್ರಿ

(ಪೋಲೀಸರೆಲ್ಲರೂ ಅವಳನ್ನು ದಾಟುತ್ತ ಎಡವುತ್ತ ಒಳಗ ಹೋಗುವರು)

ಚಿನ್ನವ್ವ:— (ಸ್ವಗತ) ಏನು ರಾಜ್ಯೇವವ್ವಾ ಇದು? ಹಳ್ಳೀ ಮಂದಿ ಮದಲು ಟಿಪಗೀ ಮಂದೀ ರಾಜ್ಯೇವು ಪಾಡೈತೀ ಅಂತ ಮಬ್ಬಿಗೆ

ಬಿದ್ದಿದ್ದೆವು ಎಲಾ ಇವರ ಮಂಜಾಳ ಹೋಗಾ! ದೇವರು ನೋಡ ತಿರಾಕಿಲ್ಲೇನು ಇವರ ಆಟಾ? ನೋಡದೇನು ಮಾಡ್ಯಾನು ಇವರ ಪಾಪದ ಕೊಡಪಾನ ತುಂಬಾಕ ಬ್ಯಾಡ? ಇನ್ನು ಬಾಳದಿನ ಉಳ್ಯೋಣಿಲ್ಲಿವರ ರಾಜ್ಯೇವು.

(ಪೋಲೀಸರು ಒಳಗಿನಿಂದ ಒಡಕು ಗಡಿಗಿ, ಮರ, ಕಸಬರಿಗಿ, ಚಿಮಣಿ, ಹರವಿ, ಹರಕುಸೀರಿ ಮೊದಲಾದವುಗಳನ್ನು ತೆಗೆದು ಕೊಂಡು ಬಂದು ಹೊರಡುವರು.

ಯಲ್ಲಪ್ಪ :— ಅವನ್ನೆಲ್ಲಿ ಒಯ್ತಿರೋ ಎಣ್ಣಾ! ನನಗ ಯವ್ವಾ ಗಂಜೀ ಯಾತರಾಗ ಮಾಡಿಕೊಡಬೇಕು?

ಪೋಲೀಸ :— ಮಾಡಿಕೊಡದಿದ್ದರೆ ಸಾಯಿ ಮಗನ.

ಚಿನ್ನವ್ವ :—ನಾವೆಲ್ಲಾರೂ ಸತ್ತವ್ಯಾಗ ನಿವೇ ನೆಟ್ಟಗಿರ್‍ಯ್ಯ ಮಾರಾಯ್ರ.

(ಪೋಲೀಸರು ಸಾಮಾನದೊಂದಿಗೆ ಹೊರಡುವರು. ಚಿನ್ನವ್ವನೂ ಯಲ್ಲನೂ ಒಳಗೆ ಹೋಗುವರು)

ತೆರೆ ಬೀಳುವದು (ತೆರೆಯ ಹೊರಗೆ)

## ೮ ನೇ ಪ್ರವೇಶ

ಸ್ಥಳ :- ಗಾಂಧೀಬಾಗು (ಧ್ವಜವಂದನೆ ನಡೆದಿದೆ 'ಝಂಡಾ ಉಂಚಾ' ಪದವನ್ನು ಅಂದ ಮೇಲೆ ಮುಖಂಡನು ಭಾಷಣೆ ಮಾಡುವನು)

ಮುಖಂಡ— ಅಣ್ಣ ತಮ್ಮಂದಿರೇ, ಈ ಕರನಿರಾಕರಣೆಯ ಚಳವಳಿಯ ಸಲುವಾಗಿ ಸರದಾರ ವಲ್ಲಭಭಾಯಿ ಯವರಂಥ ಮುಖಂಡರು ಟೊಂಕ ಕಟ್ಟಿ ಸಿಂತಿದ್ದಾರೆ. ಯಾರೂ ಹೆದರಬೇಡಿರಿ ನಿಮ್ಮ ಸಲುವಾಗಿ ಸಾವಿರಾರು ತರುಣರು ಜೀವ ಕೊಡಲಿಕ್ಕೆ ಸಿದ್ಧರಿದ್ದಾರೆ. ನಿಮಗೆ ಇದರಲ್ಲಿ ಏನಾದರೂ ಸಂದೇಹ ವಿದ್ದರೆ ಈಗಲೇ ಕೇಳಿಕೊಳ್ಳಿರಿ. ನಮ್ಮ ಮಾತು ಕೇಳಬಾಡ್ರಿ ಎಂದು ಸರಕಾರದವರು ಹೇಳಬಹುದು. ಅದನ್ನು ಯಾರೂ ಲಕ್ಷ್ಯಕ್ಕೆ ತಂದುಕೊಳ್ಳಬೇಡಿರಿ. ನಮಗೆ ಇಳಿದುಕೊಳ್ಳಲಿಕ್ಕೆ ಸ್ಥಳ ಕೊಟ್ಟದ್ದರಿಂದ ಬಸಪ್ಪನಿಗೆ

ಪೋಲೀಸರು ಹೊಡೆದು ಬಡಿದು ಬೆದರಿಕೆ ಹಾಕಿರುವರೆಂದು ಸುದ್ದಿಯನ್ನು ಕೇಳಿದ್ದೇವೆ. ಇಂಥ ಬೆದರಿಕೆಗೆ ಬೆದರಬೇಡಿರಿ. ರೈತರು ದೇಶಾಭಿಮಾನ ಶೂನ್ಯರಲ್ಲವೆಂದೂ. ರಣ ಹೇಡಿಗಳಲ್ಲವೆಂದೂ ಆ ಅಧಿಕಾರಿಗಳಿಗೆ ಸ್ಪಷ್ಟವಾಗಿ ಹೇಳಿರಿ. (ಭಾಷಣ ಮುಗಿಸುವನು)

ಫಕ್ಕೀರ— ಅಸನೋರೇ! ಯಾತಕ್ಕೂ ಬೆದರೋದಿಲ್ಲಬಿಡ್ರಿ. ಗೌಡರ ಮಾತು ಕೇಳಬಾರದೆಂದು ಎಲ್ಲರೂ ಆಣೀ ಮಾಡೇವು. ನಾಕು ದಿನಾ ಆತು ಗೌಡರು ಮಾತಾಡ್ಸಿದ್ರೂ ಯಾರೂ ಪಿಟ್ ಅಂತ ಒಡ ನುಡಿದಿಲ್ಲ.

ಮುಖಂಡ— ಹಾಗೇ ಮಾಡಿರಿ! ಆದರೆ ಯಾರೂ ಸುಳ್ಳು ಮಾತ್ರ ಮಾತಾಡಬೇಡಿರಿ.

ಸ್ವ. ಸೇವಕ— ಭಾರತ ಮಾತಾಕೀ

ಎಲ್ಲರೂ— ಜಯ್

ಪಡದೆ ಬೀಳುವದು

## ೯ ನೇ ಪ್ರವೇಶ

### ಸ್ಥಳ— ಗೌಡನ ಮನೆಯ ಮಹಲು

(ಗೌಡನು ಆರಾಮು ಖುರ್ಚಿಯ ಮೇಲೆ ಕುಳಿತಿದ್ದಾನೆ. ನಸುಕಿನ ೭ ಘಂಟೆಯ ಸಮಯ. ರೈತರು ತನ್ನೊಡನೆ ಮಾತನ್ನಾಡಿಸದಿರುವದರಿಂದಲೂ ಮೊದಲಿನಂತೆ ದಿನಾಲು ಹಾಲು ತರುವದು ಕಾಯಿ ತರುವದು ಮತ್ತೇನಾದರೂ ಕೆಲವು ಕೆಲಸ ಮಾಡುದದನ್ನು ಬಿಟ್ಟುಕೊಟ್ಟಿದ್ದರಿಂದಲೂ ಗೌಡನಿಗೆ ಚಿಂತೆಯಾಗಿದೆ. ಅದೇ ಚಿಂತೆಯಲ್ಲಿ ಮಗ್ನನಾಗಿ ಕುಳಿತಿದ್ದಾನೆ.

ಸ್ವ ಸೇವಕ— ( ಹೊರಗಿನಿಂದ ) ಕರಪತ್ರಾ ಒಂದು ದುಡ್ಡು, ಗೌಡರ ಪಾಶವೀವೃತ್ತಿ, ರೈತರ ಮೇಲೆ ಅತ್ಯಾಚಾರ. ಭಯಂಕರ ನೀಚತನ. ತಾಜಾಸುದ್ದಿ.

ಗೌಡ— ಹೊರಗೆ ಯಾರಿದ್ದೀರಿ? ಪಿರ್ಯಾ,?

ವಾಲೀಕಾರ—[ ಪ್ರವೇಶಿಸಿ ] ಬಂದಿನ್ರಿ ಯಾಕ್ರೀಯಪ್ಪಾ?

ಗೌಡ—[ ಒಂದು ದುಡ್ಡು ಒಗೆದು ] ಒಂದು ಕರಪತ್ರಾ ತಗೊಂಡುಬಾ. ಹೊರಗೆ ಒದರಾಕ ಹತ್ತಾರು ನೋಡು.

ಓಲೆಕಾರ—ಹೂನ್ರಿಯಪ್ಪಾ [ ಹೋಗುವನು ]

ಗೌಡ—[ ಸ್ವಗತ] ಏನು?.......... ನನ್ನ ಅವಮಾನವೇ?............ [ ತಲೆ ಅಲ್ಲಾಡಿಸುತ್ತ ] ನೀಚತನ, ಮತ್ತು ಪಾಶವೀ ವೃತ್ತಿ ಯಾರು? ನಾನು ಮಾಡಿದ್ದು ನೀಚತನವೇ ?

[ ಓಲೇಕಾರನು ಕರಪತ್ರವನ್ನು ತಂದುಕೊಟ್ಟು ಹೋಗುವನು. ]

ಗೌಡ—[ ಕರಪತ್ರ ಓದಿಯೇ ಓದುವನು. ಅದರಲ್ಲಿಯ ಲೇಖದ ಪರಿಣಾಮವು ತುಂಬಾ ಆಗಿಹೋಗುವನು. ಮೋರೆ ಸಣ್ಣಗೆಮಾಡಿ ಹಣೆಗೆ ಕೈಹಚ್ಚಿಕೊಂಡು ] [ ಸ್ವಗತ ] ಅಹುದು ! ನಾನು ನಿಜವಾಗಿಯೂ ಪಶು! ನೀಚ! ಅಧಮ! ಚಾಂಡಾಲ! ದೇವಾ! ಈ ನೀಚ ಕೃತ್ಯಗಳನ್ನೆಲ್ಲ ನನ್ನಿಂದ ಮಾಡಿಸಿ ಇಡೀ ಹಿಂದುಸ್ತಾನದ ಜನರ ಮುಂದೆ ಅವುಗಳನ್ನು ಬೈಲಿಗೆಳೆದು ನನ್ನ ಮೋರೆಗೆ ಕಪ್ಪು ಬಳಿದೆಯಾ? ಭಕ್ತ ಪ್ರಲ್ಹಾದನನ್ನೂ ಮತ್ತು ಎಷ್ಟೋ ವಿಷ್ಣು ಭಕ್ತರನ್ನೂ ಹಿರಣ್ಯಕಶ್ಯಪನು ವೈರಿಯೆಂದು ಬಗೆದು ಅವರನ್ನು ಪರಿಪರಿಯಿಂದ ಪೀಡಿಸಿದಂತೆ ನಾನಾದರೂ ಗಾಂಧೀ ಭಕ್ತರಾದ ಎಷ್ಟೋ ಸ್ವಯಂಸೇವಕರನ್ನೂ ಬಡರೈತರನ್ನೂ ಪಿಡಿಸಿದೆನಲ್ಲವೇ? ಅಲ್ಲ. ಹಿರಣ್ಯಕಶ್ಯಪನಷ್ಟು ನೀಚನುನಾನಲ್ಲ. ದೇವಾ ಇನ್ನು ಮೇಲೆ ಇಂಥ ಅಪರಾಧಗಳನ್ನು ನನ್ನಿಂದ ಮಾಡಿಸಬೇಡ. ಛೀ! ಈ ಕಪಟೀ ಸರಕಾರದ ಅಧೀನದಲ್ಲಿದ್ದು, ಅವರ ನೌಕರಿಯಲ್ಲಿದ್ದು ಸಂಭಾವಿತನಾಗಿರುವದು ಶಕ್ಯವೇ ಇಲ್ಲ. ಹಾಗಾದರೆ ಏನು ಮಾಡಲಿ?

[ ಸುಂದರಾಸಾನಿಯು ಪ್ರವೇಶಿಸುವಳು. ]

ಸುಂದರಾ— ಯಾಕೆ ಗೌಡರ ಮೋರೆ ಬಾಡಿದೆ. ನನ್ನಿಂದ ಬರಲಿಕ್ಕೆ ತಡವಾಯಿತೆಂದೇನು ?

ಗೌಡ—[ ಸಿಟ್ಟಿನಿಂದ ] ಯಾರವರು? ಯಾರವರು? ಥೂ. ಪಿಶಾಚೀ

ನಿನ್ನ ಮೋರೆಯನ್ನು ನೋಡಲಾರೆ ಹೋಗು ನಡೆ.

ಸುಂದರಾ- ಹುಚ್ಚು ಹಿಡಿಯಿತೇನು ? ಇತ್ತ ಕಡೆ ನೋಡಿರಿ. ನಾನು........ ನಿಮ್ಮ....

ಗೌಡ— ಹುಚ್ಚು ಹಿಡಿದಿಲ್ಲ? ಹುಚ್ಚು ಬಿಟ್ಟದೆ! ಸುಂದರಸಾನೀ ಆದದ್ದಾಗಿ ಹೋಯಿತು? ಇನ್ನು ಮೇಲೆ ನಿನಗೆ ದೊಡ್ಡ ಶರಣು ಹೊಡೆಯುತ್ತೇನೆ. ಸಾಕು? ನಿನ್ನ ಸಂಗವು ಸಾಕು? ಈ ಸರಕಾರದ ನೌಕರಿಯೂ ಸಾಕು. ವಿಲಾಯತಿಯ ಬೂದಿಯಿಂದ ಬಿಳುಪಾದ ನಿನ್ನ ಮುಖದ ವ್ಯಾಮೋಹಕ್ಕೆ ಬಲಿಬಿದ್ದು ನನ್ನ ಮುದ್ದು ಹೆಂಡತಿಯನ್ನು ದುಃಖಕ್ಕೀಡುಮಾಡಿದೆ. ಅದರಂತೆಯೇ ಈ ಬಿಳಿಮೋರೆಯ ಪರಕೀಯ ಸರಕಾರದ ದಾಸಾನುದಾಸನಾಗಿ ನಮ್ಮ ದೇಶ ಬಾಂಧವರನ್ನು ಅನ್ಯಾಯವಾಗಿ ಪೀಡಿಸಿದೆನು. ಇಗೋ......ನನ್ನ ಕಣ್ಣ ಮುಂದೆ...... ಅನ್ನ ಅನ್ನ ಎಂದು ಬಾಯ್ಬಿಡುತ್ತಾ ಪ್ರಾಣ ಬಿಡುತ್ತಿರುವ....... ಬಡವರ ಚಿತ್ರವು ಬಂದು ನಿಲ್ಲುತ್ತಿದೆ. ಲಂಗೋಟಿಗೆ ಕೂಡ ಗತಿಯಿಲ್ಲದ ಬಡವರ ಚಿತ್ರವು ಕಣ್ಣ ಮುಂದೆ ನಿಂತದ್ದನ್ನು ನೋಡಿಯೂ ಈ ಜರದ ರೂಮಾಲವನ್ನು ಧರಿಸಲಾ? ಬೇಡಾ ಈ ಪರದೇಶೀ ವಸ್ತ್ರಗಳು ಬೇಡಾ [ ಮೈಮೇಲಿನ ವಸ್ತ್ರಗಳನ್ನೆಲ್ಲ ಬಿಸುಡುವನು ]

(ಗೌಡನ ಹೆಂಡತಿ ಚಹದ ಕಪ್ಪುಬಸಿ ತೆಗೆದುಕೊಂಡು ಪ್ರವೇಶಿಸುವಳು.)

ಗೌ. ಹೆಂಡತಿ— [ ಸ್ವಗತ ] ಹಾಯ್ ! ಹಾಯ್ ! ಶಿವ! ಶಿವ! ಶಂಕರಾ ! ನನ್ನನ್ನು ಬೇಗನೆ ಕೈಲಾಸಕ್ಕೆ ಒಯ್ಯಬಾರದೇ? ನಮ್ಮಪ್ಪನು ಗೌಡರಿಗೆ ಕೊಡಬೇಕೆಂಬ ಬುದ್ಧಿಯಿಂದ ಇವರೊಡನೆ ನನ್ನ ಲಗ್ನ ಮಾಡಿದರೆ ಇವರು ನನ್ನನ್ನು ಬರೇ ಒಕ್ಕಲಗಿತ್ತಿಯಂತೆ ದುಡಿ[illegible] ಸುಂದರ[illegible] ಪ್ರಿತಿಸಬೇಕೇ? ನಾನಿದನ್ನು ನೋಡಬಾರೆ. ಸಹಿಸಲಾರೆ. ದೇವಾ, ನಾನೇನು ಅಪರಾಧಮಾಡಿರುವೆನು? ಉಪಾಯವಿಲ್ಲ! ಮಡಿಯಬೇಕಾಗಿದೆ. [ ಹೀಗಂದು

ಅವಳು ಚಹವನ್ನು ಒಯ್ದು ಮೇಜಿನ ಮೇಲಿಟ್ಟು ಥರ ಥರ ನಡು ಗುತ್ತ ದೂರ ಸರಿದು ನಿಲ್ಲುವಳು]

ಗೌಡ— ಪ್ರಿಯೇ, ಬಾ ಇಲ್ಲಿ. ಈ ಸುಡುಗಾಡು ಚಹ ಬೇಕಿಲ್ಲ ಇದೇ ನನ್ನನ್ನು ಹಾಳು ಮಾಡಿದ ಛಾ! [ಕಪ್ಪುಬಸಿಗಳನ್ನಪ್ಪಳಿಸುವನು] ಬಾ! ಬೇದರಬೇಡಾ! ಬಾ! [ ಎದ್ದು ಅವಳ ಹತ್ತರ ಹೋಗಿ ] ಮೊದಲಿನ ಗೌಡನು ನಾನಲ್ಲ. ನನ್ನ ಈ ಘೋರ ಅಪರಾಧವನ್ನು ಕ್ಷಮಿಸು [ ಅಪ್ಪಿಕೊಳ್ಳುವನು ] ಭಂಗಾರದಂತಹ ನಿನ್ನನ್ನು ಬಿಟ್ಟು ಈ ಸಾನಿಯನ್ನಿಟ್ಟುಕೊಂಡೆನಲ್ಲವೇ? ನಿನ್ನನ್ನು ಎಷ್ಟು ರೀತಿಯಿಂದ ಪೀಡಿಸಿದೆನಲ್ಲ. ರಮಣೀ ಕ್ಷಮಿಸು! ಕ್ಷಮಿಸು! [ ಕೈಮೈನಡುಗಿಸುತ್ತ ] ನನಗೆ ಹೆದರಿಕೆಯಾಗಹತ್ತಿದೆ ನನ್ನ ಪಾಪಗಳ ಬಗ್ಗೆ ಬಯುಉಂಟಾಗಹತ್ತಿದೆ. ರಕ್ಷಿಸು! ರಕ್ಷಿಸು! [ಮೂರ್ಛೆಹೊಗುವನು]

ಗೌ. ಹೆಂಡತಿ— ಪೀರಪ್ಪಾ! ಪೀರಪ್ಪಾ!

ಓಲೇಕಾರ— [ಒಳಗೆ ಬಂದು] ಏನಾತ್ರೀ? ಏನಾತ್ರೀ?

ಗೌ. ಹೆಂಡತಿ— ಗಡಾನ ನೀರು ತತಾ ಚರಗೀ ಒಳಗೀಟು.

ಓಲೇಕಾರ— ಏನಾತ್ಬೇಯಕ್ಕಾ ಗೌಡರ್ಗೀ? ಕವಳಹತ್ತ್ಯೆತೇನಬೇ?

ಗೌ. ಹೆಂಡತಿ— ಹೌದಪ್ಪಾ! ಗಡಾ ನೀರುತತಾ.

[ ಹೆಂಡತಿ ಗಾಳೀ ಬೀಸುತ್ತ ಕೂಡ್ರುವಳು. ಓಲೇಕಾರ ನೀರು ತರುವನು. ಸುಂದರಸಾನಿಯು ಹೊರಟು ಹೋಗುವಳು ]

ಓಲೇಕಾರ— ಯಕ್ಕಾ! ನೀರು ಬಡಿಲ್ಯಾ ಹಣಿಗೆ? [ ನೀರುಬಡಿಯಹತ್ತುವನು]

ಗೌ. ಹೆಂಡತಿ—ಬಡಿಯಪ್ಪಾ.

ಓಲೇಕಾರ—[ಸ್ವಗತ] ಗೌಡರ್ಗೇನಾತಪ್ಪ ಮತ್ತೆ? ಮದ್ಯಾನ್ಕಡ್ಸೆ ಲಿಲಾವಿನ ಹೊರೇವು ಐತಿ [ ಅತ್ತಿತ್ತನೋಡಿ ] ಅವೇನವು? ವೈಯಾಗಿನ ಜಾಕೀಟು ಕೋಟು ಎಲ್ಲಾನೂ ಹಿಂಗ್ಯಾಗ ಒಗದಾರು?

ಗೌಡ— [ ಎಚ್ಚರ ಬರುವದು ಎದ್ದು ಕುಳಿತು][ ಸ್ವಗತ ] ಧನ್ಯ! ಧನ್ಯ! ಸರದಾರ ವಲ್ಲಭಭಾಯಿಯುವರೇ ನೀವೇ ಧನ್ಯ! ಬಡವೈತರ ಕೈವಾರಿಗಳಾಗಿ ನಮ್ಮಂಥ ಸೊಕ್ಕಿನ ಅಧಿಕಾರಿಗಳ ಮೈಸೊಕ್ಕು ಮುರಿದಂ

ಥ ನೀವೇ ಮಾನ್ಯ [ ಓಲೇ ಕಾರನ ಕಡೆಗೆ ನೋಡಿ ತಿರುವಿ ]
ಪಿರ್ಯಾ! ಇನ್ಮ್ಯಾಗನಾ ನಿನ್ನ ಗೌಡ ಅಲ್ಲಪ್ಪ.
ಓಲೇಕಾರ— ಯಾಕ್ರೀ ಗೌಡ್ರ! ಹಾಂಗ್ಯಾಕ ನುಡೀತಿರಿ.
ಗೌಡ— ನಾನು ಇನ್ನು ಮೇಲೆ ಈ ಹೊಲಸು ಗೌಡಕೀ ಮಾಡಲಾರೆ. ಬಡ ವರನ್ನು ಕೊಲ್ಲಲಾರೆ.
ಓಲೇಕಾರ— ನೀವು ಬಿಟ್ಟರ ನಾನೂ ವಾಲೀಕಾರಿಕೀ ಮಾಡೋವಲ್ಲ.
ಗೌಡ— ಅದನ್ನು ಆ ವ್ಯಾಗ ವಿಚಾರ ಮಾಡೋಣ. ಒಂದು ಪತ್ರಾ ಬರ್ದು ಕೊಡ್ತೇನಿ. ಊರಿಗೆ ಹೋಗಿ ಮಾಮಲೇದಾರ ಕಡೆಗೆ ಕೊಟ್ಟು ಬಾ. ( ಗೌಡನು ಎದ್ದು ಮೇಜಿನ ಬಳಿಗೆ ಹೋಗಿ ಒಂದು ರಾಜೀನಾಮೆ ಪತ್ರವನ್ನು ಬರಿಯಲಾರಂಬಿಸುವನು. )
ಓಲೇಕಾರ— ಹೂನ್ರಿ ! ಹಾಂಗ ಆಗ್ಲ್ರೀ ಎಪ್ಪಾ !
ಗೌಡ— ( ಬರೆದು ಅವನ ಕೈಯಲ್ಲಿಕೊಟ್ಟು ) ಇದನ್ನು ಕೊಟ್ಟು ಬಾ ! ಏನರ ಕೇಳಿದ್ರ ನನಗೇನೂ ಹೆಚಿಗೀ ಗೊತ್ತಿಲ್ರೀ ಅಂತ ಹೇಳು. ತಿಳಿತ ?
ಓಲೇಕಾರ— ಶರಣ್ರಿ! ಹೋಗಿ ಬರ್ತೇನಿ. ( ಹೋಗುವನು )
ಗೌಡ— ಪ್ರಿಯೇ ! ನಾನೀಗಲೇ ಪೇಟೆಗೆ ಹೋಗಿ ಖಾದೀ ಬಟ್ಟೆಯನ್ನೂ ನಿನಗಾಗಿ ಒಂದು ಜೊತೆ ಸೀರೆಯನ್ನೂ ತರುವೆನು. ಇನ್ನು ಮೇಲೆ ಹೆದರಬೇಡ. ತಿಳಿಯಿತೇ ? (ಹೋಗುವರು)

ತೆರೆ ಬೀಳುವದು

## ೧೦ ನೇ ಪ್ರವೇಶ

ಸ್ಥಳ:- ಒಂದು ಬೀದಿ.

(ಸ್ವಯಂಸೇವಕರು ಮೆರವಣಿಗೆಯೊಂದಿಗೆ ಪ್ರವೇಶಿಸುವರು. ನಾ ಲ್ಕಾರು ಜನರ ಕೈಯಲ್ಲಿ ಖಾದೀ ಬಟ್ಟೆಯಿದೆ. ಜಯ್ ಜಯ್‌ಕಾರವು ನಡೆದಿದೆ. ಇತ್ತ ಕಡೆಯಿಂದ ಗೌಡನು ಪ್ರವೇಶಿಸುವನು. ಗೌಡನು ಬಂದ ಕೂಡಲೇ ಮುಖಂಡನಿಗೆ ಕೈ ಮುಗಿದು)

ಗೌಡ— ಅಯ್ಯಾ ದೇಶಭಕ್ತರೇ, ಬಡವರ ಉದ್ಧಾರಕ್ಕಾಗಿಯೂ, ಈ
ಸರಕಾರದ ಅನ್ಯಾಯವನ್ನು ಬಗ್ಗು ಬಡಿಯುವದಕ್ಕಾಗಿಯೂ ಕರ
ನಿರಾಕರಣೆಯನ್ನು ಕೈಕೊಂಡ ನಿಮ್ಮಂಥ ದೇಶಭಕ್ತರನ್ನು ಪೀಡಿ
ಸಿದ ಈ ಪಾಮರನನ್ನು ಕ್ಷಮಿಸಿರಿ. ನಾನಿನ್ನು ಮೇಲೆ ಗೌಡನಲ್ಲ!
ನಿಮ್ಮ ಜೊತೆಗೆ ಸೇರಿ ದೇಶ ಸೇವೆ ಮಾಡಲಿಕ್ಕೆ ಸಿದ್ಧನಾದ ಸ್ವಯಂ
ಸೇವಕನು.

ಮುಖಂಡ— ಗೌಡರೇ ದುಃಖಿಸಬೇಡಿ! ನಿಮಗೆ ಪಶ್ಚಾತ್ತಾಪವಾಗಿ
ದ್ದುದು ಸಹಜವಾಗಿದೆ. ಆದದ್ದಾಗಿ ಹೋಯಿತು. ಮಿಂಚಿ ಹೋದ
ಮಾತಿಗೆ ಚಿಂತಿಸಿ ಫಲವಿಲ್ಲ. ಆದರೆ ಇನ್ನು ಮೇಲಾದರೂ ಸಂಪೂರ್ಣ
ಸ್ವಾರ್ಥತ್ಯಾಗ ಮಾಡಲು ನೀವು ಸಿದ್ಧರಿರುವಿರೋ?

ಗೌಡ — ಸ್ವಾಮೀ, ಇದರಲ್ಲಿ ಎಳ್ಳಷ್ಟು ಸಂಶಯ ಪಡಬೇಡಿ
ಸಂಪೂರ್ಣ ಸ್ವಾರ್ಥತ್ಯಾಗ ಮಾಡಲು ಸಿದ್ಧನಿದ್ದೇನೆ. ಇಗೊಳ್ಳಿ
ಈ ರೂಪಾಯಿ. ನಾನು ಖಾದೀ ಬಟ್ಟೆ ಕೊಳ್ಳುವದಕ್ಕೆಂದು ಹೊ
ಟಿದ್ದೆ. ಅನಾಯಾಸವಾಗಿ ನೀವೆ ಬೆಟ್ಟಿಯಾದಿರಿ.

[ಸ್ವಯಂಸೇವಕನು ಮುಂದೆ ಬಂದು ತಯಾರೀ ಅಂಗಿ ಮೊದಲಾ
ವುಗಳನ್ನು ಕೊಡುವನು]

ಮುಖಂಡ— ಗೌಡರೆ, ಧ್ವಜವಂದನೆಯನ್ನು ಮುಗಿಸಿಕೊಂಡೇ ಹೋಗಿರಿ
ಅಲ್ಲಿ ಸಭೆಯೂ ಸೇರತಕ್ಕದ್ದಿದೆ.

ಗೌಡ— ಯಾಕಾಗಲೊಲ್ಲದು ಸ್ವಾಮೀ, ಅಲ್ಲಿ ಸಭೆ ಸೇರುವದಿದೆಯೇ
ನನಗೂ ಭಾಷಣಮಾಡಲು ಅಪ್ಪಣೆ ಕೊಡುವಿರಾ?

ಮುಖಂಡ— ಗೌಡರೆ, ಇದರಲ್ಲೇತರ ಅಪ್ಪಣೆ? ನಮ್ಮ ಗಾಂಧೀ ಸ
ಕಾರದಲ್ಲಿ ದೇಶ ಸೇವೆ ಮಾಡಲಿಚ್ಛಿಸುವ ಪ್ರತಿಯೊಬ್ಬನಿಗೂ ಭಾ
ಣ ಮಾಡಲಿಕ್ಕೂ, ರೈತರ ಸೇವೆ ಮಾಡಲಿಕ್ಕೂ ಯಾವಾಗಲ
ಅಪ್ಪಣೆಯಿದೆ. ಅದ್ಕೆನೂ ತೊಂದರೆಯಿಲ್ಲ: ತಾವು ಬೇಲಾಸ
ಭಾಷಣ ಮಾಡಬಹುದು.

[ನಾಯಕನು ಸೀಟೀ ಹೊಡೆಯುವನು ಎಲ್ಲರೂ ಹೋಗುವರು]

ತೆರೆ ಏಳುವದು

# ೧೧ ನೇ ಪ್ರವೇಶ

## ಸ್ಥಳಃ- ಗಾಂಧೀ ಬಾಗು

[ಧ್ವಜವಂದನೆಗಾಗಿಯೂ, ವ್ಯಾಖ್ಯಾನ ಕೇಳುವದಕ್ಕಾಗಿಯೂ ನೂರಾರು ಜನರು ಸೇರಿದ್ದಾರೆ. ಮೆರವಣಿಗೆ ಪ್ರವೇಶಿಸುವದು. ಎಲ್ಲರೂ ದುಂಡಗೆ ನಿಲ್ಲುವರು]

ಮುಖಂಡ— ಬಂಧುಗಳೇ, ಇವತ್ತಿನ ದಿವಸ, ನಮ್ಮೆಲ್ಲರ ಸುದೈವದಿಂದ ಗೌಡರು, ನಮ್ಮ ಅನ್ಯಾಯೀ ಸರಕಾರದ, ನೌಕರಿಗೆ ಶರಣು ಹೊಡೆದು, ದೇಶ ಸೇವೆಮಾಡುವದಕ್ಕೆಂದು, ಶಿದ್ಧರಾಗಿದ್ದಾರೆ. ಆದ್ದರಿಂದ ಇವತ್ತು ಅವರೇ ಅಧ್ಯಕ್ಷ ಸ್ಥಾನವನ್ನು ವಹಿಸಬೇಕು. ಎಂದು ನಾನು ವಿನಂತೀ ಮಾಡಿಕೊಳ್ಳುತ್ತೇನೆ.

(ಗೌಡರು ಅಧ್ಯಕ್ಷ ಸ್ಥಾನವನ್ನು ವಹಿಸುವರು. 'ಝುಂಡಾ ಊಂಚಾ' ಪದವಾದ ಬಳಿಕ ಗೌಡರು ಭಾಷಣ ಮಾಡುವರು.)

ಗೌಡ:— ರೈತ ಬಾಂಧವರೇ, ಮತ್ತು ಸ್ವಯಂಸೇವಕರೇ, ಈ ವರ್ಷ ಈ ಊರ ಪರಿಸ್ಥಿತಿಯು ಕೆಟ್ಟಾಗ್ಯೂ ನಾನೂ ಮತ್ತು ನನ್ನಂತಹ ಎಷ್ಟೋ ಸೊಕ್ಕಿನ ಅಧಿಕಾರಿಗಳೂ ಮನಬಂದಂತೆ ವರ್ತಿಸಿ ನಿಮಗೆ ಅಕಲ್ಯಾಣ ಮಾಡಿದ್ದೇವೆ. ನಾವು ಅಣೇವಾರಿಯನ್ನು ಚೆನ್ನಾಗಿ ಮಾಡಿಸಿಲ್ಲ. ಮತ್ತು ನಿಮಗೆ ಹಿತವಾಗಬೇಕೆಂದು ತಿಳಿದು ಮನಃಪೂರ್ವಕ ಅರ್ಜೀ ವಗ್ಯೆರೆ ಏನೂ ಮಾಡಿಲ್ಲ. ಬರೇ ಹೆಸರಿಗೆ ಮಾತ್ರ ಅರ್ಜೀ ಕಳಿಸಿದ್ದೇವೆ. ಈ ರೀತಿ ನಿಮಗೆ ಕಷ್ಟ ಕೊಟ್ಟದ್ದಕ್ಕಾಗಿ ನನಗೆ ಬಹಳ ಕೆಡಕೆನಿಸುತ್ತದೆ. ದಯಮಾಡಿ ನನ್ನನ್ನು ಕ್ಷಮಿಸಿರಿ. ಇದು ವರೆಗೆ ನಿಮಗೆ ಉಂಟು ಮಾಡಿದ ಕಷ್ಟನಷ್ಟಗಳ ಬಗ್ಗೆ ನಿಮಗೆ ಜಾಹೀರ ರೀತಿಯಿಂದ ಕ್ಷಮೆ ಬೇಡುತ್ತೆನೆ. ಈ ಸರಕಾರದವರ ದಬ್ಬಾಳಿಕೆಯ ನಿಷೇಧಾರ್ಥವಾಗಿ ನನ್ನ ಕೆಲಸಕ್ಕೆ ರಾಜೀನಾಮೆ ಕೊಟ್ಟದ್ದೇನೆ. ಇಂದಿನಿಂದ ನಿಮ್ಮೊಡನೆ ಸೇರಿ ಕರನಿರಾಕರಣೆಯಲ್ಲಿಯೂ ಭಾಗ ತೆಗೆದುಕೊಳ್ಳುತ್ತೇನೆ.



# ಪಿ. ವ್ಹಿ. ಗೋಡಖಿಂಡಿ

ಮತ್ತು

ಕಂಪನಿ

**ಧಾರವಾಡ**

## P. V. Godakhindi & Co.

## DHARWAR.

ನಮ್ಮಲ್ಲಿ ಎಲ್ಲ ತರದ ಗಡಿಯಾರಗಳೂ, ಸ್ಟೋವ್ಹಗಳೂ, ತರತರದ ಗಡಿಯಾರದ ಕರಪಳಿ ಮತ್ತು ಪಟ್ಟಿಗಳೂ, ಚಾಳಿಸಗಳೂ ಯೋಗ್ಯದರದಿಂದ ಮಾರಲಿಕ್ಕೆ ಸಿಗುತ್ತವೆ. ಇದಲ್ಲದೆ ಎಲ್ಲ ತರದ ಟಾಯಿಂಪೀಸುಗಳನ್ನೂ, ವಾಚುಗಳನ್ನೂ, ದೊಡ್ಡ ಗಡಿಯಾರಗಳನ್ನೂ ಸ್ಟೋವ್ಹಗಳನ್ನೂ ಉತ್ತಮವಾಗಿ ರಿಪೇರೀ ಮಾಡಿಕೊಡುತ್ತೇವೆ. ಒಮ್ಮೆ ಅನುಭವ ಪಡೆದು ಖಾತ್ರೀ ಮಾಡಿಕೊಳ್ಳಿರಿ.

---

## ಶ್ರೀಕೃಷ್ಣ ವಿಲಾಸ



**ಹೊಸ ಉಪಹಾರಾಲಯ!** **ಹೊಸ ಭೋಜನಾಲಯ!!**

**ಗಾಂಧೀ ಕೂಟ, ಧಾರವಾಡ**

ಗಾಂಧೀ ಕೂಟಿನಲ್ಲಿ ನಾವು ನವೀನವಾದ ಉಪಹಾರಾಲಯ ಮತ್ತು ಭೋಜನಾಲಯವನ್ನು ಪ್ರಾರಂಭಿಸಿದ್ದೇವೆ. ಉಪಹಾರದಲ್ಲಿ ದಿನಾಲು ಬೇರೆ ಬೇರೆ ಸವಿಕಟ್ಟಾದ ಪದಾರ್ಥಗಳನ್ನು ಮಾಡುವೆವು. ಊಟದ ವ್ಯಂಜನ ಪದಾರ್ಥಗಳಲ್ಲಿಯೂ ಬದಲಾವಣಿಯಾಗುವದು. ಇಂಥ ವ್ಯವಸ್ಥೆಯು ಧಾರವಾಡದಲ್ಲಿ ನಮ್ಮಲ್ಲಿಯೇ ಕಂಡು ಬರುವದು. ನಾವು ಮಾಡುವ ಸಾಮಾನುಗಳು ಉತ್ಕೃಷ್ಟವಾಗಿರುತ್ತವೆಂದು ಈವರೆಗೆ ನಮ್ಮನ್ನು ಬಲ್ಲವರಿಗೆ ಗೊತ್ತುಂಟು. ಸುಲಭ ದರ! ಒಮ್ಮೆ ಅನುಭವ ಪಡೆದು ನೋಡಿರಿ! ನಮ್ಮಲ್ಲಿ ಒಂದು ಸಾರೆ ಬಂದುಹೋದರೆ ನಮ್ಮ ಅಂಗಡಿ ಎಂದೆಂದಿಗೂ ಬಿಡಲಾರಿರಿ!

**ಕೆ. ರಾಮಚಂದ್ರಾಚಾರ್ಯ.**

